# ಮಾನಸಿ

ತಿಂಗಳ ಪತ್ರಿಕೆ
ಡಿಸೆಂಬರ್ : 2000

# ಮಾನಸ

ತಿಂಗಳ ಪತ್ರಿಕೆ

ಸಂಪುಟ : 18 ಸಂಚಿಕೆ : 11

ಡಿಸೆಂಬರ್ : 2000



ವಿಳಾಸ
"ಮಾನಸ" ತಿಂಗಳ ಪತ್ರಿಕೆ
ಪಂಚಾಯಿತಿ ರಸ್ತೆ
ಕಾಡುಗೋಡಿ ಪೋಸ್ಟ್
ಬೆಂಗಳೂರು - 560 067

ಸೂಚನೆ : ಬಿಡಿ ಪ್ರತಿ **4-00** ರೂ.
ವಾರ್ಷಿಕ ಚಂದಾ **50-00** ರೂ.

ಒಂದು ವಿಶೇಷ ಸಂಚಿಕೆಯೊಂದಿಗೆ
ಒಟ್ಟು ಹನ್ನೊಂದು ಸಂಚಿಕೆಗಳು

## *ಈ ಸಂಚಿಕೆಯಲ್ಲಿ......*





ಸಂಪಾದಕರು, ಪ್ರಕಾಶಕರು ಹಾಗೂ ಮುದ್ರಕರು : ಮಾನವಿ ಮುದ್ರಣಾಲಯ
ಪಂಚಾಯಿತಿ ರಸ್ತೆ, ಕಾಡುಗೋಡಿ ಅಂಚೆ, ಬೆಂಗಳೂರು - ೫೬೦ ೦೬೭

# ಸ್ತ್ರೀ ಕುರಿತ ಶ್ರವಣ ಧರ್ಮದ ವಿಚಾರಗಳು : ಒಂದು ಟಿಪ್ಪಣಿ

○ ಶ್ಯಾಮಲ, ಕೋಲಾರ

"ಸುಂದರವಾದ ಹಕ್ಕಿಯೇ ಪಂಜರದಲ್ಲಿ ಬಂಧಿಯಾಗುವುದು" ಎಂಬ ಚೀನಾದ ಗಾದೆಯೊಂದಿದೆ. ಸೌಂದರ್ಯ ಎನ್ನುವುದನ್ನು ಕೇವಲ ಲೈಂಗಿಕತೆಯ ಮಟ್ಟಕ್ಕಿಳಿಸಿ ನೋಡುವ ಪುರುಷ ಪ್ರಧಾನ ಸಮಾಜದ ಸ್ತ್ರೀ ಕುರಿತ ಈ ಗಾದೆ ಮಾತು ಇಡೀ ಜಗತ್ತಿನ ಪುರುಷ ಅಹಂಮಿನ ಧ್ವನಿಯಾಗಿದೆ. ಹಾಗೆಯೇ ಈ ಪುರುಷ ನೆಲೆಯ ಗ್ರಹಿಕೆಯನ್ನೇ ಇಡೀ ಮಹಿಳಾ ಸಮಾಜವು ಪರೋಕ್ಷವಾಗಿ ಒಪ್ಪಿಕೊಳ್ಳುವಂತಹ ಪರಿಸರವನ್ನೇ ಸಮಾಜ ಸೃಷ್ಟಿಸಿದೆ. ಹೀಗಾಗಿ ಬಹುತೇಕ ಮಹಿಳೆಯರು ಪುರುಷರ ನೆಲೆಯಿಂದ ವ್ಯಾಖ್ಯಾನಿಸಲ್ಪಟ್ಟಿರುವ ಇಂತಹ ಸತ್ಯವನ್ನೇ ತಾವೂ ನಂಬಿ ನಡೆಯುವ ದುರ್ಬಲ ಮನಸ್ಥಿತಿಯವರಾಗಿದ್ದಾರೆ. ಇದು ದುರಂತವೆಂಬುದನ್ನು ಅರಿಯಲೇ ಆಗದ ಸ್ಥಿತಿ ತಲುಪಿದ್ದಾರೆ.

ವ್ಯಕ್ತಿತ್ವವೆಂದರೆ ಭೌತಿಕವಾದದ್ದಲ್ಲ; ಅದು ಮಾನಸಿಕ ವಾದದ್ದು ಎಂಬ ನಿಜ ತಿಳುವಳಿಕೆ ಮಹಿಳೆಯ ಮನಸ್ಸಿನಿಂದಲೇ ದೂರ ಸರಿಯುವಂತೆ ಮಾಡಲಾಗಿದೆ. ಕೇವಲ ಚೆಲುವು, ಅಲಂಕಾರಗಳನ್ನು ಕಂಡು ಹತ್ತಿರವಾಗುವ ದೇಹಾರಾಧನೆಯ ಪುರುಷರಿಗೆ ಹೆಣ್ಣಿನ ಉಸಿರುಗಟ್ಟಿಸುವ ಸ್ಥಿತಿಯಾಗಲೀ ಅಥವಾ ಆಕೆಯ ಭಾವ ಪ್ರಪಂಚದ ಮಾನಸಿಕ ವ್ಯಕ್ತಿತ್ವದಗೊಡವೆ ಯಾಗಲೀ ಬೇಕೇ ಇರುವುದಿಲ್ಲ. ಹೀಗಾಗಿ ಇಂತಹ ದೇಹ ಪ್ರಧಾನ ಸ್ತ್ರೀಪುರುಷ ಸಂಬಂಧಗಳಲ್ಲಿ ಅನ್ಯೋನ್ಯತೆ ಹಾಗೂ ಅರ್ಥಪೂರ್ಣ ನಿಕಟತೆಗಳು ಸಾಧ್ಯವಾಗದೇ ಇವು ಶಾರೀರಿಕ ಸುಖದ ಹಂತದಲ್ಲೇ ಉಳಿದು ಬಿಡುವುದರಿಂದ ಅವು ಸ್ತ್ರೀ-ಪುರುಷರ ಶಿಥಿಲ ಸಂಬಂಧದಲ್ಲಿ ಕೊನೆಗಾಣುತ್ತವೆ. ಇಲ್ಲವೇ ಮಹಿಳೆಯ ಆತ್ಮಗೌರವಕ್ಕೆ ಹೊರತಾದ ಮೌನ ಸಮ್ಮತಿಯಲ್ಲಿ "ಹೇಗೋ ಹೊಂದಾಣಿಕೆ"ಯೆಂಬ ಅನಿವಾರ್ಯತೆಯಲ್ಲಿ ಬಂದು ನಿಲ್ಲುತ್ತದೆ.

ಪುರುಷ ಪ್ರಧಾನ ಸಮಾಜದ ಒಪ್ಪಿತ ಮೌಲ್ಯ (Accepted values)ಗಳನ್ನೇ ಕುರುಡಾಗಿ ಅನುಕರಿಸುವ ಎಷ್ಟು ಮಂದಿ ಮಹಿಳೆಯರು ಇಂದಿನ ಸ್ಥಿತಿಯಲ್ಲಿ ತಮ್ಮ ಆತ್ಮಗೌರವದ ವ್ಯಕ್ತಿತ್ವವನ್ನು ಗೌರವಿಸುವ ಪುರುಷರನ್ನು ಆಯ್ಕೆ ಮಾಡಿಕೊಳ್ಳುವ ಎಲ್ಲಾ ರೀತಿಯ ಧೈರ್ಯ ತೋರಿಸಿಯಾರು? ಅಥವಾ ಅದೆಷ್ಟರವರೆಗೆ ಸಾಧ್ಯ? ಪುರುಷರು ಮಹಿಳೆಯರನ್ನು ಮಾನಸಿಕ ವ್ಯಕ್ತಿತ್ವದವರನ್ನಾಗಿ ಎಂದೂ ನೋಡುವುದಿಲ್ಲ ವಾದ್ದರಿಂದ, ಅವರ ಪಾಲಿಗೆ ದೈಹಿಕ ಆಕರ್ಷಣೆಯಾಗ ಬಲ್ಲಂತಹ ದೇಹದ ವಿಶೇಷ ಅಲಂಕಾರವನ್ನು ತ್ಯಜಿಸುವಂತೆ ಮಹಾತ್ಮಗಾಂಧಿ ಸ್ತ್ರೀಯರಿಗೆ ಕರೆನೀಡಿದ್ದರು. ಹೆಣ್ಣಿನ ಸಹಜತೆಯೇ ಆಕೆಯ ಬಾಹ್ಯ ಸೌಂದರ್ಯವಾದರೆ, ನೈತಿಕತೆ, ಆತ್ಮಗೌರವದ ಬದುಕಿನ ಆಯ್ಕೆಯೇ ಅಂತಹ ತಿಳುವಳಿಕೆ, ಧೈರ್ಯದ ನಿಲುವುಗಳೇ ಆಕೆ ಅಂತರಂಗಿಕ ಚೆಲುವಾಗುತ್ತದೆ.

ಇಡೀ ಸಮಾಜ ಇಂದು ಪುರುಷ ಆತ್ಮರತಿ (Male norsises complex)ಯಿಂದ ನರಳುತ್ತಿದೆ. ವರ್ಗ ಭೇದವಿಲ್ಲದಂತೆ ಹೆಣ್ಣು ಆಯಾಯ ಅಂತಸ್ತುಗಳಿಗೆ ತಕ್ಕಂತೆ ವಂಚಿಸಲ್ಪಡುತ್ತಿದ್ದಾಳೆ.

* ಮೇಲ್ವರ್ಗದಲ್ಲಿ ಆಕೆ ಬೆಲೆಬಾಳುವ ಆಭರಣವಾಗಿದ್ದಾಳೆ; ಅಲಂಕಾರವಾಗಿದ್ದಾಳೆ; ಪ್ರತಿಷ್ಠೆಯ ಪ್ರದರ್ಶನವಾಗಿದ್ದಾಳೆ.
* ಮಧ್ಯಮ ವರ್ಗದಲ್ಲಿ ಪಂಜರದಲ್ಲಿ ಸೆರೆಯಾದ ಹಕ್ಕಿಯಾಗಿದ್ದಾಳೆ. ಮಡಿವಂತಿಕೆಯ ಪರಿಸರದಲ್ಲಿ ದೈಹಿಕ ಹಾಗೂ ಮಾನಸಿಕವಾದ ಅಸ್ಪೃಶ್ಯತೆಗೆ ಒಳಗಾಗಿದ್ದಾಳೆ; ಆಜೀವ ಬಂಧಿ; ಭೋಗವಸ್ತುವಾಗಿದ್ದಾಳೆ.
* ಕೆಳ ವರ್ಗದಲ್ಲಿ ಮನೆಯ ಒಳಗೂ; ಹೊರಗೂ ಏಕಪ್ರಕಾರವಾಗಿ ದುಡಿಯುವ ನಿರಂತರ ಜೀತ ದಾಳಾಗಿದ್ದಾಳೆ. ಬಾಹ್ಯ ಪ್ರಪಂಚದ ಅಶ್ಲೀಲ ನೋಟಕ್ಕೆ ಅಗ್ಗದ "ವಸ್ತು"ವಾಗಿದ್ದಾಳೆ.

ಒಟ್ಟು ಪುರುಷ ಸಮಾಜದ ಈ ನಿಲುವುಗಳೇ ಆ ವರ್ಗ ರೂಪಿಸಿದ ಧಾರ್ಮಿಕ ತತ್ವಗಳಲ್ಲೂ ಪ್ರಧಾನವಾಗಿರುವುದನ್ನು ನಾವು ಗಮನಿಸಬಹುದಾಗಿದೆ. ಅಂದರೆ ಹೆಣ್ಣಿನ ಆತ್ಮದ ಬಗ್ಗೆ, ಪುರುಷ ಆತ್ಮದ ಬಗ್ಗೆ ಚಿಂತಿಸುವಂತೆ ಚಿಂತಿಸದೆ ಕೇವಲ ಆಕೆಯನ್ನು ಶಾರೀರಿಕವಾಗಿ, ಲೈಂಗಿಕವಾಗಿಯಷ್ಟೇ ನೋಡಿ-ಆ ಕಾರಣಕ್ಕಾಗಿಯೇ ಮಹಿಳೆಯನ್ನು ಧಾರ್ಮಿಕ ವಲಯದಿಂದ ಉಚ್ಚಾಟಿಸಿ ಹೊರಗಿಡಲಾಯಿತು. ಆದರೆ ಮಹಿಳೆಯೇ ಇಲ್ಲದಿದ್ದಲ್ಲಿ ಪುರುಷ ಆತ್ಮದ ಅಸ್ತಿತ್ವವಾದರೂ ಎಲ್ಲಿ? ಆಗ ಮೋಕ್ಷದ ಪ್ರಶ್ನೆ ಉದ್ಭವಿಸುವುದಾದರೂ ಎಲ್ಲಿ?

ಧಾರ್ಮಿಕ ಪುರುಷನೆಂದೂ ಸ್ತ್ರೀಯನ್ನು ತನ್ನ ತತ್ವಾಸಕ್ತಿಯ ಬೌದ್ಧಿಕ ಸಹಚಾರಣಿಯನ್ನಾಗಿ ಪರಿಗಣಿಸಿದ ಉದಾಹರಣೆಗಳು ಇಲ್ಲವೇ ಇಲ್ಲವೆನ್ನಬಹುದು. ಗಾರ್ಗಿ, ಮೈತ್ರೇಯಿ, ಚಾರ್ವಾಕನ ಹೆಂಡತಿ ಚಾರಿಣಿ....ಹೀಗೆ ಅಪವಾದಗಳು ಮಾತ್ರ ಸಾಧ್ಯ?

ಈ ದೇಶದ ಯಾವ ಮಹಿಳೆಯೂ ಧರ್ಮವೊಂದರ ಮೂಲ ಸಂಸ್ಥಾಪಕಿಯಾಗಲಿಲ್ಲ. ಯಾವ ಪ್ರಮುಖ ದರ್ಶನವನ್ನೂ ರೂಪಿಸಿಲಿಲ್ಲ. ಜೈನ ಧರ್ಮದ 24 ಜನ ತೀರ್ಥಂಕರರಲ್ಲಿ ಪ್ರಾಯಶಃ ಒಬ್ಬಳೂ ಮಹಿಳೆಯಿಲ್ಲ. ಗಾರ್ಗಿ, ಮೈತ್ರೇಯಿ, ಋಗ್ವೇದದ ಋಕ್ಕುಗಳನ್ನು ಬರೆದ ಕೆಲ ಮಹಿಳೆಯರು, ಭಕ್ತಿಪಂಥದ ಮೀರಾಬಾಯಿ, ಲಲ್ಲಾದೇವಿ, ಹೇಮರೆಡ್ಡಿ ಮಲ್ಲಮ್ಮ, ಸಂಚಿಯ ಹೊನ್ನಮ್ಮ, ಕೆಳವರ್ಗಗಳ ವಚನಕಾರ್ತಿಯರು, ಅಕ್ಕಮಹಾದೇವಿ, ಆಂಡಾಳ್ ಅಥವಾ ಗೋದಾ...ಹೀಗೆ ಅಪರೂಪಕ್ಕೆ ಹೆಸರಿಸಬಹುದಾದ ಕೆಲವು ಹೆಸರುಗಳನ್ನು ಹೊರತು ಪಡಿಸಿದರೆ ಮಹಿಳೆಯರು ಧಾರ್ಮಿಕ ಅಭಿವ್ಯಕ್ತಿ ತೀವ್ರವಾಗಿ ಪುರುಷ ಸಮಾಜದಿಂದ ನಿಯಂತ್ರಿಸಲ್ಪಟ್ಟಿದೆ.

ಲೈಂಗಿಕತೆಯನ್ನು ಜೈವಿಕ(Biodogical)ವೆಂದು, ನಿಸರ್ಗ ಸಹಜವೆಂದು ಗ್ರಹಿಸ[illegible]ರದವರು ಮಾತ್ರ ಅದನ್ನೊಂದು ಪಾಪವೆಂಬಂತೆ ಪರಿಗಣಿಸಿದರು. ಹೀಗೆ ಪರಿಗಣಿಸಿದವರು ತಮ್ಮದೂ ಸಮಪಾಲಿರುವ ಆ ಪಾಪದಿಂದ ದೂರವಿರಲಿಕ್ಕೆಂದೇ ಹೆಣ್ಣಿಂದ ದೂರವುಳಿಯುವ ಧಾರ್ಮಿಕ ನಿರ್ಧಾರಕ್ಕೆ ಬಂದರು.

ಬುದ್ಧ ಕೂಡ ಸ್ತ್ರೀಯರನ್ನು ತನ್ನ ಸಂಘಕ್ಕೆ ಸೇರಿಸಿಕೊಳ್ಳುವುದರಲ್ಲಿ ಹಿಂದು ಮುಂದು ಯೋಚಿಸಿದ. ಹೆಣ್ಣಿನೊಂದಿಗೆ ವ್ಯವಹರಿಸುವಾಗ ಆಕೆಯನ್ನು ತಲೆಎತ್ತಿ ನೋಡಲೇ ಬಾರದೆಂದ. ನೋಡಲೇ ಬೇಕಾದ ಅನಿವಾರ್ಯತೆ ಬಂದಲ್ಲಿ ವಯಸ್ಸಾದ ಹೆಣ್ಣನ್ನು ತಾಯಿಯಂತೆಯೂ, ಸಮವಯಸ್ಕರನ್ನು ಅಕ್ಕತಂಗಿಯರಂತೆಯೂ ಹಾಗೂ ಚಿಕ್ಕವಯಸ್ಸಿನವರನ್ನು ಮಗುವಂತೆಯೂ ಕಾಣುವಂತೆ ತಿಳಿಸಿದ್ದಾನೆ. ಯಾಕೆಂದರೆ ಬೆಂಕಿ ಮೇಣಕ್ಕೆ ಹತ್ತಿರವಾದರೂ, ಮೇಣವೇ ಬೆಂಕಿಗೆ ಹತ್ತಿರವಾದರೂ ಕರಗುವುದು ಮೇಣವೇ ಎಂಬುದು ಬುದ್ಧನ ಅಭಿಪ್ರಾಯ. ಇಲ್ಲಿ ಹೆಣ್ಣು "ಬೆಂಕಿ" ಎಂಬ ಒಳಧ್ವನಿಯೊಂದು ಅಪ್ರಯತ್ನಪೂರ್ವಕವಾಗಿಯಾಗಿದರೂ ಕೇಳಿಸುತ್ತದೆ. ಸಮಾನ ಆಸಕ್ತ ಕ್ರಿಯೆಯಲ್ಲಿ ಯಾರೂ ಮೇಣ, ಯಾರು ಬೆಂಕಿ ಎಂಬ ವಾದವೇ ಅಪ್ರಸ್ತುತವೆನಿಸುತ್ತದೆ. ಎಲ್ಲೋ ಪುರುಷಪರ ಧಾರ್ಮಿಕ ಪಕ್ಷಪಾತವಾಗುತ್ತದೆ.

ಆದರೆ ಬೌದ್ಧ ತಾಂತ್ರಿಕ ಪಂಥವಾದ 'ವಜ್ರಾಯನ'ವು ಮಾತ್ರ ಪ್ರತಿಯೊಬ್ಬ ಸ್ತ್ರೀಯೂ ಪ್ರಜ್ಞೆಯ ಅವತಾರವಾದ್ದರಿಂದ ಸ್ತ್ರೀಭೋಗ ಪಾಪವೇ ಅಲ್ಲವೆಂದು ಹೇಳಿದೆ.

ಟಿಬೆಟ್ಟಿನ Athos Monastery ಯಲ್ಲಿ (ಬೌದ್ಧವಿಹಾರ) ಮೂರು ಸಾವಿರ ಭಿಕ್ಷುಗಳಿದ್ದಾರೆ. ಇಲ್ಲಿನ ಭಿಕ್ಷುಗಳನ್ನು ಸ್ತ್ರೀ ಸಂಗದಿಂದ ಎಷ್ಟು ಕಠೋರವಾಗಿ ದೂರವಿರಿಸಲಾಗಿದೆಯೆಂದರೆ ಅದರ ಘೋರ ಪರಿಣಾಮಗಳು ಹೀಗಿವೆ: ಅಲ್ಲಿ ಕೇವಲ ಆರು ತಿಂಗಳ ಹೆಣ್ಣು ಕೂಸು ಕೂಡ ಈ ಬೌದ್ಧ ಭಿಕ್ಷುಗಳಿಗೆ ಸಿಕ್ಕಿಬಿದ್ದರೆ ಪಾರಾಗಲಾರದು! ಇದು ಏನನ್ನು ಸೂಚಿಸುತ್ತದೆ? ಸ್ತ್ರೀಯರನ್ನು ಹೊರತು ಪಡಿಸುವ, ನಿಸರ್ಗ ನಿಯಮವನ್ನು ಬಲವಂತವಾಗಿ ಮೀರಲೆಳೆಸುವ ಯಾವುದೇ ಧರ್ಮ, ಯಾವ ಕಾಲದಲ್ಲೂ ಅಂತಿಮವಾಗಿ ತಲುಪುವ ವಿಕೃತ ಪರಿಣಾಮದ ಬಗ್ಗೆಯೇ ಹೇಳುತ್ತದೆ.

ಸ್ತ್ರೀ ಮುಕ್ತಿಯತ್ತ ತಾವು ಆಸಕ್ತರು ಎಂಬ ಘೋಷಣೆಯನ್ನು ನೀಡಿದ ಜೈನ ಧರ್ಮ ಒಬ್ಬ ತೀರ್ಥಂಕರಿಣಿಯನ್ನು ಸೃಷ್ಟಿಸಲಿಲ್ಲ. ಜೈನ ಸಾಹಿತ್ಯದಲ್ಲೂ ಅತ್ತಿಮಬ್ಬೆಯಂತಹ ಒಂದೆರಡು ಸಾಹಿತ್ಯ ಪೋಷಕ ಮಹಿಳೆಯರನ್ನು ಹೊರತು ಪಡಿಸಿದರೆ ಮಹಾ ಕವಯತ್ರಿ ಅಥವಾ ಬರಹಗಾರ್ತಿಯರು ಹುಟ್ಟಲಿಲ್ಲ. ಬೌದ್ಧರ ಝೆನ್ ಧರ್ಮದ 28 ಗುರುಗಳಲ್ಲೂ ಯಾರೂ ಮಹಿಳೆಯರಿಲ್ಲ.

ಜೈನ ಧರ್ಮದ ಆದಿ ವೃಷಭನ ಅಂದರೆ ಆದಿ ತೀರ್ಥಂಕರನ ಮಕ್ಕಳಾದ ಬ್ರಾಹ್ಮಿ ಮತ್ತು ಸುಂದರಿಯರ ನೇತೃತ್ವದಲ್ಲಿ 3 ಲಕ್ಷ ''ಕಂತಿ''ಯರೆಂಬ ಹೆಸರಿನ ಸನ್ಯಾಸಿನಿಯರಿದ್ದರಂತೆ. ಜೈನ ಮಹಿಳೆ 'ಕಂತಿ'ಯಾಗಬಹುದಾದರೂ ಆಕೆಗೆ ಈ ಜನ್ಮದಲ್ಲೇ ಮೋಕ್ಷವಿಲ್ಲ. ಆಕೆ ಕಂತಿಯಾಗಿ ಕರ್ಮಕ್ಷಯ ಮಾಡಿಕೊಂಡು ಪುನಃ ಪುರುಷನಾಗಿ ಜನ್ಮವೆತ್ತಿಯೇ ಮುಕ್ತಿ ಪಡೆಯಬೇಕಿತ್ತು. ಇದು ಪುರುಷ ಪ್ರಯತ್ನವೆಂಬ ಮಾತನ್ನೇ ಸಮರ್ಥಿಸುವಂತಿದೆಯೇ ಹೊರತು ಸ್ತ್ರೀ ಪ್ರಯತ್ನವೆಂಬುದೇನಿಲ್ಲವೆಂಬುದನ್ನು ಒತ್ತಿ ಹೇಳುವಂತಿದೆ.

ಜೈನ, ಬೌದ್ಧ ಧರ್ಮಗಳೆರಡೂ ಮಾನಸಿಕ ಹಾಗೂ ದೈಹಿಕ ಹಿಂಸೆಗೆ ಸಿಕ್ಕಿ ಜರ್ಜರಿತರಾಗುತ್ತಿದ್ದ ಮಹಿಳೆಯ ವಿಮೋಚನೆಗೆ ಕೊಡಬೇಕಾದಷ್ಟು ಮಹತ್ವ ನೀಡಲಿಲ್ಲ. ಆಕೆಯ ಲೌಕಿಕ ಬದುಕಿನ ವಿಮೋಚನೆಗಿಂತಲೂ ಪಾರಮಾರ್ಥಿಕ ಮುಕ್ತಿಯತ್ತಲೇ ಅಷ್ಟೋ ಇಷ್ಟೋ ಆಲೋಚಿಸಿವೆಯಷ್ಟೇ. ಮಹಿಳೆಯ ವಿಮೋಚನೆ ಕುರಿತು ಈ ಧರ್ಮಗಳು ಗಂಭೀರವಾಗಿ ಪರಿಗಣಿಸಿದ್ದಿದ್ದರೆ ಜಗತ್ತಿನಲ್ಲೇ ಇವು ಅದ್ಭುತ ಮಾನವ ಧರ್ಮಗಳಾಗಿ ಬಿಡುತ್ತಿದ್ದವು.

ಮಹಿಳೆ ಚರಿತ್ರೆಯ ವಿವಿಧ ಕಾಲಘಟ್ಟಗಳಲ್ಲಿ ಕುಟುಂಬ ಮುಖ್ಯಳಾಗಿದ್ದಾಳೆ; ದೇವತೆಯಾಗಿದ್ದಾಳೆ; ಗುಲಾಮಳಾಗಿದ್ದಾಳೆ; ನರ್ತಕಿ, ಗಾಯಕಿ, ಹೋರಾಟಗಾರ್ತಿಯಾಗಿದ್ದಾಳೆ; ಆತ್ಮಗೌರವದ ಉನ್ನತ ಶಿಖರ ಏರಿದ್ದಾಳೆ; ಮಹಾ ಕಾವ್ಯಗಳ ಶೃಂಗಾರ ನಾಯಕಿಯಾಗಿ, ದುರಂತಗಳ ಮೂಲವಾಗಿದ್ದಾಳೆ; ಇಡೀ ಮನುಕುಲದ ಸೃಷ್ಟಿ ಚೇತನದ ಮುಂದುವರಿಕೆಯಾಗಿದ್ದಾಳೆ; ಮಾನವ ಜನಾಂಗದ ತಾಯಿಯಾಗಿದ್ದಾಳೆ. ಆದರೆ ಎಂದೂ ಆಕೆ ಸ್ವತಂತ್ರಳಾಗಿರಲಿಲ್ಲ; ಸ್ವತಂತ್ರಳಾಗಲೂ ಇಲ್ಲ!

ಹೆಚ್ಚು ಸ್ವೇಚ್ಛಾಚಾರವನ್ನು ಅನುಭವಿಸುವ ಪುರುಷ ವರ್ಗ ಪರದಾಗಳಲ್ಲೇ ಕೊಳೆಸಿ ಹಾಕುವ ಸ್ತ್ರೀಯರಿಗೆ ಮಾತ್ರ ಶೀಲ, ಸಚ್ಚಾರಿತ್ರಗಳ ಬಗ್ಗೆ ಭೋದಿಸಿರುವುದು ಈ ದೇಶದ ಧರ್ಮ, ಸಾಹಿತ್ಯ, ಚರಿತ್ರೆ, ಕಲೆಗಳ ಅತ್ಯಂತ ಹಾಸ್ಯಾಸ್ಪದ ಅಂಶಗಳಾಗಿವೆ ಮತ್ತು ಘೋರ ವಿಪರ್ಯಾಸವಾಗಿದೆ. ಅರ್ಧ ಸಮಾಜ ವಾಗಿರುವ ಸ್ತ್ರೀಗೆ ಎಲ್ಲಾ ರೀತಿಯ ಸ್ವಾತಂತ್ರ್ಯ ಕಲ್ಪಿಸಿದಂದು ಭಾಷೆ, ಕಲೆ, ಧರ್ಮಗಳು ಅವುಗಳ ಸುಂದರ ಸೋಪಾನಗಳನ್ನೇರ ಬಲ್ಲವು. ಅಲ್ಲಿಯವರೆಗೆ ಅರ್ಧ ಸಮಾಜಕ್ಕೆ ಅನ್ವಯವಾಗುವ ನೀತಿಗಳೆಲ್ಲವೂ ಕೇವಲ ಅರ್ಧ ಸತ್ಯದವು. ಅವೆಂದೂ ಮಹಿಳೆಯನ್ನು ಬಿಟ್ಟಲ್ಲಿ ಸಮಗ್ರವಾಗಲು ಸಾಧ್ಯವೇ ಇಲ್ಲ. ಹೀಗಾಗಿ ಜಗತ್ತಿನೆಲ್ಲ ದರ್ಶನಗಳು, ಸೃಜನಶೀಲ ಹಾಗೂ ಕ್ರಿಯಾತ್ಮಕ ಸಾಧನೆಗಳು, ನಾಗರೀಕತೆಗಳ ವಿಕಸನಗಳು, ಈ ಸಮಾಜಕ್ಕೆ ದೊರೆತಿರುವ ಇದುವರೆಗಿನ ಕೊಡುಗೆಗಳು, ಎಲ್ಲ ವಲಯಗಳ ಬೆಳವಣಿಗೆಗಳು ಕೂಡ ಈ ನೆಲೆಯಿಂದ ಕೇವಲ ಅರ್ಧ ಸಮಾಜದ ಚಟುವಟಿಕೆಗಳಾಗಿವೆಯೆಂದು ಹೇಳದೆ ವಿಧಿಯಲ್ಲ.

○

# ಹೆಣ್ಣು ಶಿಶುವಿನ ಹತ್ಯಾಕಾಂಡ

ಕತಿಹಾರ್‌ನ ಊರಿನಲ್ಲಿ 40 ವಯಸ್ಸಿನ ಫೂಲ್‌ದೇವಿ ಈ ಹತ್ತು ವರುಷಗಳಲ್ಲಿ 65 ಹೆಣ್ಣು ಶಿಶುಗಳ ಹತ್ಯೆಗೈಯ್ದಿದ್ದಾಳೆ. ಒಂದೊಂದು ಕೂಸಿನ ಹತ್ಯೆಗೆ ರೂ. 50ರಂತೆ ಶುಲ್ಕ ಪಡೆದಿದ್ದಾಳೆ. ಮಿಡ್‌ವೈಫ್ ಆಗಿರುವ ಫೂಲ್‌ದೇವಿಯನ್ನು 5 ವರುಷಗಳ ನಂತರ ಈಗ ಭೇಟಿಯಾದಾಗ ಆಕೆ ಹೇಳಿದ್ದು "ನಾನು ರೂ. 500 ಶುಲ್ಕ ನೀಡಿ ಈ ಕೃತ್ಯ ಎಸಗು ಎಂದು ಯಾರು ಕೇಳಿದರೂ ಮಾಡುವುದಿಲ್ಲ. ನಾ ಮಾಡಿದ ಪಾಪಕ್ಕೆ ದೇವರು ನನಗೆ ಸರಿಯಾದ ಶಿಕ್ಷೆ ವಿಧಿಸಿರುವ' ಎಂದು ತನ್ನ ಇಬ್ಬರು ಗಂಡು ಮಕ್ಕಳ ದಾರುಣಕತೆ ಹೇಳಿದಳು. ಒಬ್ಬ ಮಗ ರಸ್ತೆ ಅಪಘಾತದಲ್ಲಿ ಕಾಲು ಮುರಿದುಕೊಂಡು ನಡೆಯಲು ಆಗದ ಸ್ಥಿತಿಯಲ್ಲಿದ್ದಾನೆ. ಮತ್ತೊಬ್ಬ ಮಗ ಕಳೆದ ವರುಷ ಅಚಾನಕ್ ತೀರಿಕೊಂಡನೆಂದು ದುಃಖಿಸಿದಳು. ಆಕಸ್ಮಿತವೆಂಬಂತೆ ಮತ್ತೊಬ್ಬ ದಾದಿ 60 ವಯಸ್ಸಿನ ಹಕಿಯಾ ದೇವಿಯು ತನ್ನ ಹದಿಹರೆಯದ ಮಗನನ್ನು ಕಳೆದು ಕೊಂಡದ್ದನ್ನು ಹೇಳಿ ಪರಿತಪಿಸಿದಳು. ಇವರಿಬ್ಬರು ಹೆಣ್ಣು ಶಿಶುವಿನ ಹತ್ಯೆ ಮಾಡುವುದನ್ನು ಬಿಟ್ಟು ಈಗ ಅದೇ ಊರಿನ "ಬಾಲ ಮಹಿಳಾ ಕಲ್ಯಾಣಿ" ಎಂಬ ಸಂಸ್ಥೆ ಸೇರಿಕೊಂಡು ಈ ದಾರುಣ ಅಮಾನವೀಯ ಕೃತ್ಯವನ್ನು ತಡೆಯುಲು ಆ ಸಂಸ್ಥೆಗೆ ಸಹಾಯಕರಾಗಿ ದುಡಿಯುತ್ತಿದ್ದಾರೆ. ಹೆಣ್ಣು ಶಿಶುವಿನ ಹತ್ಯೆಗೆ ಸಂಬಂಧಪಟ್ಟಂತೆ ಯಾರಾದರೂ ಇವರನ್ನು ಸಂಪರ್ಕಿಸಿದ ತಕ್ಷಣವೇ ಸಂಸ್ಥೆಗೆ ತಿಳಿಸಿ ಅದನ್ನು ತಡೆಯುವಲ್ಲಿ ಕಾರ್ಯಗತ ರಾಗುತ್ತಾರೆ.

ಸುಮಾರು 5 ವರುಷಗಳ ಹಿಂದೆ ಕತಿಹಾರ್ ಪ್ರಾಂತ್ಯದಲ್ಲಿ ನಡೆಯುತ್ತಿದ್ದ ಶಿಶುಹತ್ಯೆಯ ಪ್ರಕರಣೆ ಬಹಿರಂಗ ಪಡಿಸಿದಾಗಿನಿಂದ ಈ ದಾದಿಯರು ವಿಪರೀತ ಹಿಂಸೆಗೆ ಒಳಪಟ್ಟಿರುತ್ತಾರೆ. ಪರಿಸ್ಥಿತಿ ಹೀಗಿರಲು ಹೆಣ್ಣು ಶಿಶುವಿನ ಹತ್ಯೆಯ ಸಂಖ್ಯೆ ಎಳ್ಳಷ್ಟು ಕಡಿಮೆಯಾಗದೆ ಸತತವಾಗಿ ಮುಂದುವರಿದು ಕೊಂಡು ಬಂದಿದೆ. ಶಿಶುಹತ್ಯೆಯ ಶುಲ್ಕ ರೂ. 100 ರಿಂದ 150 ರವರೆಗೂ ಆಗಿದೆ. ಹತ್ಯೆಯ ರೀತಿಯು, ಹತ್ಯೆ ಗೈಯ್ಯುವ ಜನರು ಮಾತ್ರ ಬದಲಾಗಿದ್ದಾರೆ. ಹೆಣ್ಣು ಕೂಸು ಜನನ ಹೊಂದುವ ಮೊದಲೇ ಗರ್ಭಾಶಯದಲ್ಲೇ ಹತ್ಯೆಗೊಳಗಾಗುತ್ತಿರುವ ಸಂಖ್ಯೆ ಏರುತ್ತಿದೆ.

ನಾವು ಭೇಟಿ ಮಾಡಿದ ಮತ್ತೊಬ್ಬ ದಾದಿ ಭಾಗೋದೇವಿಯ ಪ್ರಕಾರ "ಹೆಣ್ಣು ಕೂಸು ಮೂರು ತಿಂಗಳು ಇರುವಾಗ ಅದರ ಹತ್ಯೆ ಮಾಡಿಸಲು ನಮ್ಮ ಹತ್ತಿರ ಬರುತ್ತಾರೆ. ಆಗ ನಾನು ಯಾವುದೇ ಕಾರಣಕ್ಕೂ ನಾನು ಈ ಹತ್ಯೆ ಮಾಡುವುದಿಲ್ಲ. ನಿಮಗೆ ಸಾಕಲು ಆಗದಿದ್ದಲ್ಲಿ, ನನಗೆ ಕೊಡಿ ನಾನು ಸಾಕುವೆ ಎಂದರೂ ಬೇರೆಯವರ ಮುಖಾಂತರ ಆ ಶಿಶುವು ಹತ್ಯೆಗೊಳ್ಳ ಪಟ್ಟಿರುತ್ತದೆ."

ಈ ಹತ್ಯಾಕಾಂಡದಲ್ಲಿ ನಮಗೆ ಮತ್ತೊಂದು ನಿಜಾಂಶ ಗೋಚರವಾಯಿತು. ಬಿಳಿಕೋಟು ಧರಿಸಿ, ಉತ್ತಮ ನಯ ನಾಜೂಕಿನ ಉಪಕರಣಗಳನ್ನೊಳಗೊಂಡ ಜೀವ ರಕ್ಷಿಸಿ ಉಳಿಸಿ ಖಾಸಗಿ ನರ್ಸಿಂಗ್ ಹೋಮ್‌ನವರು ಭಾಗಿಯಾಗಿದ್ದಾರೆ. ಗರ್ಭಾಶಯದಲ್ಲೇ ಅಥವಾ ಜನನಾಂತರ ಹೆಣ್ಣು ಶಿಶುವಿನ ಅಂತ್ಯವನ್ನು ರಹಸ್ಯವಾಗಿ ಸತತವಾಗಿ ನಡೆಸಿಕೊಂಡು ಬಂದಿದ್ದಾರೆ.

ಮತ್ತೊಬ್ಬ ದಾದಿ ಅನಿಲಾಕುಮಾರಿಯು ಹೇಳುವಂತೆ ನಾಯಿ ಕೊಡೆಯಂತೆ ಹಲವಾರು ನರ್ಸಿಂಗ್ ಹೋಮ್‌ಗಳು ತಲೆ ಎತ್ತಿವೆ" ವಿಪರ್ಯಾಸವೆಂದರೆ ಈ ಐದು ವರುಷಗಳಲ್ಲಿ ಹೆಣ್ಣು ವಿಶೇಷ ತಜ್ಞರನ್ನೊಳಗೊಂಡ, "ಸುರಕ್ಷತೆ ಜನನದ" ಬಗ್ಗೆ ಎಚ್ಚರವಹಿಸುವೆವು ಎಂದು ಕೊಚ್ಚಿಕೊಳ್ಳಲು ಈ ಖಾಸಗಿ ನರ್ಸಿಂಗ್ ಹೋಮ್‌ಗಳು, ಹಾಲು ಗೆನ್ನಯ, ಅರ್ಹತೆ ಪಡೆಯುವ ಮೊದಲೇ ಶವಾಗಾರದ ದಾರಿ ತೋರಿಸುತ್ತಿದ್ದಾರೆ.

○

# ಸಾಮಾಜಿಕ ಪಿಡುಗಾಗುತ್ತಿರುವ ಲೈಂಗಿಕ - ಕಿರುಕುಳ

ಅಕ್ಟೋಬರ್ 17ರಂದು ಮದ್ರಾಸಿನ ವಿಲ್ಲುಪುರಂನಲ್ಲಿ ಆರ್ಟ್ಸ್ ಕಾಲೇಜಿನಲ್ಲಿ ಓದುತ್ತಿದ್ದ ಪುಷ್ಪರಾಜ್ ಎಂಬ ವಿದ್ಯಾರ್ಥಿಯನ್ನು ಇರಿದು ಕೊಲೆ ಮಾಡಲಾಯಿತು. ಬಡ, ಅನಕ್ಷರಸ್ಥ ತಂದೆತಾಯಿಗಳ ಹಿರಿಯ ಮಗನಾದ ಪುಷ್ಪರಾಜ್ ಮಾಡಿದ ಅಪರಾಧವೇನು ಗೊತ್ತೆ? ಕಾಲೇಜ್ ಕ್ಯಾಂಪಸ್‌ನಲ್ಲಿ ಮಹಿಳೆಯೊಬ್ಬಳ ಮೇಲೆ ಸಾರ್ವಜನಿಕವಾಗಿ ನಡೆದ ಲೈಂಗಿಕ ಕಿರುಕುಳವನ್ನು ತಡೆಯಲು ಹೋಗಿದ್ದು.

ಅಕ್ಟೋಬರ್ 8ರಂದು ಉತ್ತರ ಪ್ರದೇಶದ ಜಾನ್‌ಪುರದ ಬಳಿಯಿರುವ ಬಾಗ್ಮಾಲ್‌ಪುರದಲ್ಲಿ ದಲಿತ ಮಹಿಳೆಯನ್ನು ಕೊಂದು ಅವಳ ಮನೆಯನ್ನು ಸುಡಲಾಯಿತು. ಕಾರಣ ಆಕೆ ತನ್ನ ಮಗಳಿಗೆ ಲೈಂಗಿಕ ಕಿರುಕುಳ ನೀಡಿದವರನ್ನು ವಿರೋಧಿಸಿದ್ದಕ್ಕೆ.

ಅದೇ ತಿಂಗಳಿನಲ್ಲಿ ದೆಹಲಿಯಲ್ಲಿ ನಡೆದ ಘಟನೆ ಕುರಿತು ಕರ್ನಾಟಕ ಸರ್ಕಾರ ವಿಚಾರಣೆಗೆ ಅನುಮತಿ ನೀಡಿತು. ಘಟನೆ ಏನೆಂದರೆ ರಾಜ್ಯ ಸರ್ಕಾರದ ಐ.ಎ.ಎಸ್. ಅಧಿಕಾರಿಯೊಬ್ಬ ದೆಹಲಿಯ ಆಂಧ್ರ ಭವನದಲ್ಲಿ ಆಂಧ್ರ ಪ್ರದೇಶದ ಸರ್ಕಾರದ ನೌಕರರೊಬ್ಬರ ಹೆಂಡತಿಯೊಬ್ಬರಿಗೆ ಕಿರುಕುಳ ನೀಡಿದ್ದಕ್ಕೆ.

ಹಾಗೆಯೇ ಕೇರಳದಲ್ಲಿ ಇಬ್ಬರು ಮಹಿಳೆಯರು ಲೈಂಗಿಕ ಕಿರುಕುಳದ ವಿರುದ್ಧ ದೂರು ನೀಡಿದ್ದರಿಂದ ಉಂಟಾದ ಪರಿಣಾಮದಿಂದಾಗಿ ಆಘಾತಗೊಂಡಿದ್ದಾರೆ. ಅವರಲ್ಲಿ ಒಬ್ಬರು ಕ್ಯಾಲಿಕತ್ ವಿಶ್ವವಿದ್ಯಾಲಯದಲ್ಲಿ ನೌಕರರು. ವಿದ್ಯಾಸಂಸ್ಥೆಯೊಂದರಲ್ಲಿನ ನೌಕರನೊಬ್ಬ ಆಕೆಯನ್ನು ಬಸ್ಸಿನಲ್ಲಿ ಲೈಂಗಿಕವಾಗಿ ಹಿಂಸಿಸಿದ್ದರ ವಿರುದ್ಧ ದೂರು ನೀಡಿದ್ದರು. ಬಸ್ಸಿನಲ್ಲಿ ಸಹ ಪ್ರಮಾಣಿಕರು ವಾಹನವನ್ನು ಪೋಲಿಸ್ ಠಾಣೆಗೆ ಒಯ್ಯಲು ಸಹಾಯ ಮಾಡಿದರೂ ಸಹ ದೂರು ನೀಡುವ ಹಂತದಲ್ಲಿ ಠಾಣೆ ಪೋಲೀಸರಿಂದ ಉಂಟಾದ ಕಿರುಕುಳ, ಅವಮಾನದಿಂದ ಆಕೆ ಜರ್ಜರಿತರಾಗಿದ್ದಾರೆ. ಕಂಪ್ಲೆಂಟ್ ನೀಡಿ ಹತ್ತು ತಿಂಗಳಾಗಿದೆ. ಆ ಅವಧಿಯಲ್ಲಿ ಆಕೆಯ ಚಾರಿತ್ರ್ಯವಧೆ ಮಾಡುವ, ಬಹಿಷ್ಕರಿಸುವ, ಆಕೆಯ ಮಗಳ ಮೇಲೆ ಸೇಡು ತೀರಿಸಿಕೊಳ್ಳುವೆವೆಂದು ಬೆದರಿಸುವ ಪ್ರಯತ್ನಗಳು ನಡೆದಿವೆ. ಭಯದಿಂದಾಗಿ ಆಕೆ ಕ್ಯಾಲಿಕತ್‌ನಿಂದ ತಿರುವನಂತಪುರಕ್ಕೆ ಹೋಗಿ ನೆಲೆಸುವಂತಾಗಿದೆ. ಮೊಕದ್ದಮೆ ಇನ್ನೂ ಕೇರಳ ಹೈಕೋರ್ಟಿನ ಮುಂದಿದೆ.

ಮತ್ತೊಬ್ಬ ಐ.ಎ.ಎಸ್. ಅಧಿಕಾರಿಯು ತಾವು ಕೆಲಸ ಮಾಡುತ್ತಿದ್ದ ಇಲಾಖೆಯ ಮಂತ್ರಿಯೊಬ್ಬರಿಂದ ಅನುಭವಿಸಿದ ಲೈಂಗಿಕ ಕಿರುಕುಳದ ವಿರುದ್ಧ ಮುಖ್ಯ ಮಂತ್ರಿಯವರಿಗೆ ದೂರು ಸಲ್ಲಿಸಿದ್ದು. ಇನ್ನು ಪರಿಣಾಮಕ್ಕಾಗಿ ಕಾಯುತ್ತಿದ್ದಾರೆ. ಅದೇ ಮಂತ್ರಿಯಿಂದ ಇದೇ ರೀತಿಯ ಕಿರುಕುಳಕ್ಕೆ ಒಳಗಾಗಿದ್ದ ಮತ್ತೊಬ್ಬ ಐ.ಎಫ್.ಎಸ್. ಮಹಿಳಾ ಅಧಿಕಾರಿಯೊಬ್ಬರು ಸಹ ಮಹಿಳಾ ಆಯೋಗದ ಮುಂದೆ ಮೌಖಿಕ ಹೇಳಿಕೆ ನೀಡಿದ್ದಾರೆ, ಸಾರ್ವಜನಿಕವಾಗಿಯೂ ಹೇಳಿಕೆ ನೀಡಿದ್ದಾರೆ (ಮುಂದಿನ ಪರಿಣಾಮದ ಭೀತಿಯಿಂದಾಗಿ ಲಿಖಿತ ದೂರು ನೀಡಿಲ್ಲ).

ಇಷ್ಟಾಗಿಯೂ ಆಡಳಿತ ಪಕ್ಷದ ಮೈತ್ರಿಕೂಟದಲ್ಲಿರುವ ತಮ್ಮ ರಾಜಕೀಯ ಪಕ್ಷದ ಬೆಂಬಲದಿಂದ ಅಧಿಕಾರಿಯ ವಿರುದ್ಧ ಕ್ರಮ ಜರುಗಿಸಲು ಮಂತ್ರಿಯವರು ಮುಂದಾಗಿದ್ದಾರೆ. ಮಂತ್ರಿಗಿರಿಯಿಂದ ಇಳಿಸಲಾಗಿದ್ದರೂ ವಿಧಾನ ಸಭೆಯ ಸದಸ್ಯನಾಗಿ ಮುಂದುವರೆದಿದ್ದಾರೆ. ಆದರೆ ದೂರು ನೀಡಿದ ಅಧಿಕಾರಿಯ ವೈಯಕ್ತಿಕ ಮತ್ತು ಪ್ರೊಫೆಶನಲ್ ನೈತಿಕತೆಯನ್ನು ಸ್ಥಳೀಯ ಮಾಧ್ಯಮಗಳು ಸಾರ್ವಜನಿಕವಾಗಿ ಪ್ರಶ್ನಿಸಿದವು. ಆಕೆಯ ಆರೋಪ ಕುರಿತಂತೆ ಮಂತ್ರಿಯ ಪಕ್ಷದವರು ನಿಯೋಜಿಸಿದ ಆಯೋಗವು ಪರಿಸ್ಥಿತಿಯನ್ನು ಇನ್ನಷ್ಟು ಹದಗೆಡಿಸಿತು. ಆಯೋಗದ ಮುಖ್ಯಸ್ಥರಾಗಿ ನಿವೃತ್ತರಾದ ನ್ಯಾಯಾಧೀಶರು, ಆಕೆ ಆಂತರಿಕ ವಿಚಾರಣೆಗೆಂದು ಮಾಡಿಕೊಂಡ ಮನವಿಯನ್ನು ತಿರಸ್ಕರಿಸುವ ಮೂಲಕ ತಮ್ಮ ಅಸೂಕ್ಷ್ಮತೆಯನ್ನು ಸಾಬೀತು ಪಡಿಸಿದರು. ಮಹಿಳಾ ಸಂಘಟನೆಗಳು, ಮಹಿಳಾ ಆಯೋಗವು ಸಾಮಾಜಿಕ ವಾತಾವರಣವನ್ನು ಗಮನದಲ್ಲಿಟ್ಟುಕೊಂಡು ಆಂತರಿಕ ವಿಚಾರಣೆಯನ್ನು ಬೆಂಬಲಿಸಿದ್ದರು. ಘಟನೆಗೆ ಯಾವ ಹೋಲಿಕೆಯೂ ಇಲ್ಲದೆ ಮೋನಿಕಾ ಲೆವೆನ್‌ಸ್ಕಿ ಮತ್ತು ಬಿಲ್‌ಕ್ಲಿಂಟನ್‌ರ ವಿವಾದವನ್ನು ಸಮರ್ಥಿಸಿಕೊಳ್ಳಲು ಬಳಸಿದ್ದು ಅಸಗತ್ಯ ಮತ್ತು ಅಪ್ರಸ್ತುತ. ಈ ಆಯೋಗದಿಂದಾಗಿ ಸಿ.ಬಿ.ಐ. ವಿಚಾರಣೆಯೂ ನಿಂತು ಹೋಯಿತು.

ದೂರು ನೀಡಿದವರು ಮತ್ತು ಹಲವಾರು ಸಾಕ್ಷಿಗಳು ಆಯೋಗದೊಂದಿಗೆ ಸಹಕರಿಸಲು ಒಪ್ಪದಿದ್ದ ಕಾರಣ ಆಯೋಗದಿಂದ ಏನೂ ಪ್ರಯೋಜನವಾಗಲಿಲ್ಲ. ಆಯೋಗದ ಅವಧಿಯನ್ನು ಒಂದು ತಿಂಗಳಿನಿಂದ ಆರು ತಿಂಗಳಿಗೆ ವಿಸ್ತರಿಸಲಾಗಿತ್ತು, ಅಲ್ಲದೆ 8.5 ಲಕ್ಷ ರೂಪಾಯಿಗಳನ್ನು ಆಯೋಗಕ್ಕೆಂದು ನೀಡಲಾಗಿತ್ತು. ಸಮಯ, ಹಣ ಎರಡನ್ನೂ

ಕಬಳಿಸಿದ ಆಯೋಗದಿಂದ ಏನೂ ಆಗದೆ ಸಿ.ಬಿ.ಐ. ಮತ್ತೆ ವಿಚಾರಣೆಯನ್ನು ಕೈಗೆತ್ತಿಕೊಂಡಿದೆ. ಅಪಮಾನಿತಳಾಗಿ ಒಂದು ವರ್ಷವಾದರೂ (ಘಟನೆ ನಡೆದದ್ದು ಡಿಸೆಂಬರ್ 1999ರಲ್ಲಿ) ಇನ್ನೂ ತೀರ್ಪು ಹೊರಬಂದಿಲ್ಲ.

ಇತ್ತೀಚೆಗೆ ತಾನು ಕೆಲಸ ಮಾಡುವ ಸ್ಥಳದಲ್ಲಿನ ಲೈಂಗಿಕ ಹಿಂಸೆಯಿಂದ ಹೈದರಾಬಾದಿನ ವಕೀಲರೊಬ್ಬರು ಆತ್ಮಹತ್ಯೆ ಮಾಡಿಕೊಂಡರು. ಕಳೆದೆರಡು ವರ್ಷಗಳಲ್ಲಿ ಅನೇಕ ಮಹಿಳೆಯರು ಸಾರ್ವಜನಿಕವಾಗಿ ಲೈಂಗಿಕ ಕಿರುಕುಳಕ್ಕೆ ಒಳಗಾದ ಕಾರಣಕ್ಕೆ ಸತ್ತಿರುವುದನ್ನು ಮಾಧ್ಯಮಗಳು ವರದಿ ಮಾಡಿವೆ. ಕಲ್ಕತ್ತಾ, ಚೆನ್ನೈ, ಜೈಪುರ, ಕಾನ್ಪುರ ಹೀಗೆ ದೇಶದೆಲ್ಲೆಡೆ ಹೀನಾಯ ಘಟನೆಗಳು ನಡೆದಿವೆ. ಅಲ್ಲದೆ ದೇಶದ ಮೂಲೆ ಮೂಲೆಗಳಲ್ಲಿ ಪ್ರೇಮಿಸಲಿಲ್ಲ ಎಂಬ ಕಾರಣಕ್ಕೆ ಹೆಣ್ಣುಮಕ್ಕಳು ಮತ್ತು ಹೆಂಗಸರನ್ನು ಕೊಲೆ ಮಾಡಿರುವ, ಊನ ಮಾಡಿರುವ, ಆಸಿಡ್ ಎರಚಿ ವಿರೂಪಗೊಳಿಸಿರುವ ಲೆಕ್ಕವಿಲ್ಲದ್ದಷ್ಟು ಘಟನೆಗಳು ವರದಿಯಾಗಿವೆ. ಈ ರೀತಿಯ ಘೋರ ಲೈಂಗಿಕ ಹಿಂಸೆ ವ್ಯಾಪಕವಾಗುತ್ತಿದೆ.

ಸಾರ್ವಜನಿಕ ಸ್ಥಳ ಮತ್ತು ಕೆಲಸ ಮಾಡುವ ಸ್ಥಳಗಳಲ್ಲಿ ನಡೆಯುತ್ತಿರುವ ಲೈಂಗಿಕ ಹಿಂಸೆ ದೇಶದೆಲ್ಲೆಡೆ ಹರಡುತ್ತಿರುವ ಸಾಮಾಜಿಕ ಪಿಡುಗು. 1992ರ ರಾಷ್ಟ್ರೀಯ ಅಪರಾಧ ದಾಖಲೆಗಳ ಕಛೇರಿಯ ಪ್ರಕಾರ ಪ್ರತಿ 51 ನಿಮಿಷಕ್ಕೆ ಒಬ್ಬ ಹೆಂಗಸು ಅಥವಾ ಹುಡುಗಿ ಲೈಂಗಿಕ ಹಿಂಸೆಗೆ ಒಳಗಾಗುತ್ತಿದ್ದಾಳೆ. ಸಂವಾದ ಎಂಬ ಸಂಸ್ಥೆಯು 1994ರಲ್ಲಿ ಸಣ್ಣ ಮಕ್ಕಳ ಮೇಲೆ ನಡೆಯುವ ಲೈಂಗಿಕ ಹಿಂಸೆ ಕುರಿತು ಒಂದು ಅಧ್ಯಯನ ನಡೆಸಿತು. ಕನ್ನಡ ಮಾಧ್ಯಮ, ಇಂಗ್ಲೀಷ್ ಮಾಧ್ಯಮ, ನಗರ, ಗ್ರಾಮೀಣ ಪ್ರದೇಶಗಳ ಶಾಲೆಗಳಲ್ಲಿ ಅಧ್ಯಯನ ನಡೆಸಿದ್ದು ಅದರ ಪ್ರಕಾರ 82% ಹುಡುಗಿಯರು ಈವ್ ಟೀಸಿಂಗ್‌ಗೆ ಒಳಗಾಗಿದ್ದರು. ಜೊತೆಗೆ 70% ಹುಡುಗಿಯರು ಈವ್ ಟೀಸಿಂಗ್ ಘಟನೆಗಳನ್ನು ಕಣ್ಣಾರೆ ಕಂಡಿದ್ದರು. ಈ ಅಧ್ಯಯಯನದಿಂದ ಹೊರಬಂದ ಅಂಶವೆಂದರೆ ಈವ್ ಟೀಸಿಂಗ್ ವ್ಯಾಪಕವಾಗುತ್ತಿದೆ. ಈವ್ ಟೀಸಿಂಗ್ ಮಾಡುವವರೂ ಹೆಚ್ಚುತ್ತಿದ್ದು ಅವರಿಗೆ ಜನರೆದುರಿನಲ್ಲೆ ಅಪರಾಧ ನಡೆಸುವ ಬಗ್ಗೆ ಯಾವ ಭಯವೂ ಇಲ್ಲ. ಈವ ಟೀಸಿಂಗ್ ನಿತ್ಯದ ವಿಷಯವಾಗಿ ಬಿಟ್ಟಿದೆ ಎಂದು ಪ್ರತಿಕ್ರಿಯಿಸಿದವರೆಲ್ಲರೂ ಹೇಳಿದ್ದಾರೆ.

ಲೈಂಗಿಕ ಕಿರುಕುಳ ಕುರಿತು ಈಗಿರುವ ಕಾನೂನಾಗಲಿ ಅಥವಾ 1997ರಲ್ಲಿ ಸುಪ್ರೀಂಕೋರ್ಟ್ ಲೈಂಗಿಕ ಹಿಂಸೆಯನ್ನು ಅಪರಾಧವೆಂದು ಪರಿಗಣಿಸಿದ ತೀರ್ಪಾಗಲಿ ಸರಿಯಾಗಿ ಪರಿಣಾಮ ಬೀರಿಲ್ಲ. ಲಕ್ನೊ ವಿಶ್ವವಿದ್ಯಾಲಯದ ಮಹಿಳಾ ಅಧ್ಯಯನ ವಿಭಾಗದವರು ನಡೆಸಿದ ಅಧ್ಯಯನದ ಪ್ರಕಾರ ವಿಶ್ವವಿದ್ಯಾಲಯದ ಪ್ರತಿಯೊಬ್ಬ ವಿದ್ಯಾರ್ಥಿನಿಯೂ, ದಿನಕ್ಕೆ ಕನಿಷ್ಠ ಮೂರು ಬಾರಿ ಲೈಂಗಿಕ ಕಿರುಕುಳಕ್ಕೆ ಒಳಗಾಗುತ್ತಾಳೆ. 90% ಶಿಕ್ಷಕಿಯರೂ ಸಹ ನಿತ್ಯ ಲೈಂಗಿಕ ಹಿಂಸೆ, ಅವಮಾನಕ್ಕೆ ಒಳಗಾಗುತ್ತಿದ್ದಾರೆ.

ದೆಹಲಿ ವಿಶ್ವವಿದ್ಯಾಲಯದ ವಿದ್ಯಾರ್ಥಿಗಳ ಗುಂಪೊಂದು 1996ರಲ್ಲಿ ಲೈಂಗಿಕ ಹಿಂಸೆ ಕುರಿತು ತಂದ ವರದಿಯ ಪ್ರಕಾರ 48% ಮಹಿಳಾ ವಿದ್ಯಾರ್ಥಿಗಳು ಶಿಕ್ಷಕ, ಶಿಕ್ಷಕೇತರ ಸಿಬ್ಬಂದಿಗಳಿಂದ ಲೈಂಗಿಕ ಹಿಂಸೆ ಅನುಭವಿಸಿದ್ದಾರೆ. ಸಂಖ್ಯೆ ಇನ್ನೂ ಹೆಚ್ಚಿನದು ಎಂಬುದು ವಿದ್ಯಾರ್ಥಿ ಗುಂಪಿನ ಅನಿಸಿಕೆ. 91%ಕ್ಕಿಂತ ಹೆಚ್ಚಿನ ಹಾಸ್ಟೆಲ್ ವಿದ್ಯಾರ್ಥಿಗಳು ಕ್ಯಾಂಪಸ್ ಸುತ್ತಮುತ್ತಲಿನ 88% ಮತ್ತು ಸಿಬ್ಬಂದಿ ವಸತಿ ಗೃಹದಲ್ಲಿ ವಾಸಿಸುವ 85% ಮಹಿಳೆಯರು ಕ್ಯಾಂಪಸ್ ರಸ್ತೆಗಳಲ್ಲಿ ಲೈಂಗಿಕ ಹಿಂಸೆಗೆ ಒಳಗಾಗಿದ್ದಾರೆ. ಈ ರೀತಿ ರಸ್ತೆಯಲ್ಲಿ ನಡೆಯುವ ಲೈಂಗಿಕ ಕಿರುಕುಳು ಎಷ್ಟು ಸಾಮಾನ್ಯವಾಗಿ ಬಿಟ್ಟಿದೆಯೆಂದರೆ ಒಂದು ವರದಿಯ ಪ್ರಕಾರ ಹಿಂಸೆಗೆ ಒಳಗಾದವರು ಅದನ್ನು ನಿತ್ಯದ ಸತ್ಯ ಮತ್ತು ಮಹಿಳೆಯ ಜೀವನದಲ್ಲಿ ಇದು ಮಾಮೂಲಿ ಎನ್ನುತ್ತಾರೆ.

ವರದಿಯು ವಿವರವಾಗಿದ್ದು ಲೈಂಗಿಕ ಕಿರುಕುಳುವೆಂದರೇನೂ ಎಂಬುದನ್ನೂ ವಿವರಿಸಿ, ಅದರ ವಿವಿಧ ರೀತಿಗಳನ್ನು, ಅದಕ್ಕೆ ಕಾರಣ, ಪರಿಣಾಮಗಳನ್ನೂ ಒಳಗೊಂಡಿದೆ. ವಿಶ್ವವಿದ್ಯಾನಿಲಯಕ್ಕೆ ಹೊಂದಿಕೊಂಡಿರುವ ಅನೇಕ ಇಲಾಖೆ ಮತ್ತು ಕಾಲೇಜುಗಳಲ್ಲಿ ನಡೆದಿರುವ ಲೈಂಗಿಕ ಕಿರುಕುಳದಿಂದ ಘಟನೆಗಳ ಮೇಲೆ ವರದಿಯೂ ಬೆಳಕು ಚೆಲ್ಲುತ್ತವ. ಒಂದು ಘಟನೆಯಲ್ಲಿ ಅಪರಾಧಿಯನ್ನು ಶಿಕ್ಷಿಸಲು ವಿಶ್ವವಿದ್ಯಾಲಯವು 10 ವರ್ಷಗಳ ದೀರ್ಘ ಅವಧಿಯನ್ನು ತೆಗೆದುಕೊಂಡಿದೆ. ಅಪರಾಧಿಯೂ ಒಂದು ಇಲಾಖೆಯ ಮುಖ್ಯಸ್ಥನಾಗಿದ್ದು, ಆ ಇಲಾಖೆಯು ಮಹಿಳಾ ಉದ್ಯೋಗಿಗಳು ಅನೇಕ ಬಾರಿ ದೂರು ನೀಡಿದ್ದರು. ಭೋದಕರ ಮತ್ತು ವಿದ್ಯಾರ್ಥಿಗಳ ನಿರಂತರವಾಗಿ ಒತ್ತಡ ತಂದಿದ್ದರಿಂದ 1996ರಲ್ಲಿ ಅಪರಾಧಿಯನ್ನು ಕೆಲಸದಿಂದ ವಜಾ ಮಾಡಲಾಯಿತು.

ಮಾಧ್ಯಮದ ವರದಿಯೊಂದರ ಪ್ರಕಾರ ಲಕ್ನೊ ವಿಶ್ವವಿದ್ಯಾಲಯವು ಕುಪ್ರಸಿದ್ಧ ಇತಿಹಾಸ ಹೊಂದಿದೆ. ಪುರುಷ ಅಧ್ಯಾಪಕರುಗಳು ಮಹಿಳಾ ಸಿಬ್ಬಂದಿ ಮತ್ತು ವಿದ್ಯಾರ್ಥಿನಿಯರ ಮೇಲೆ ಮೇಲೆ ನಡೆಸುತ್ತಿರುವ ಲೈಂಗಿಕ ಹಗರಣಗಳಿಂದಾಗಿ ಪ್ರಸಿದ್ಧವಾಗಿದೆ. ಇತ್ತೀಚೆಗೆ ಮಹಿಳಾ ಅಧ್ಯಾಪಕರೊಬ್ಬರು ತಮ್ಮ ಸಹೋದ್ಯೋಗಿ ಒಬ್ಬರಿಗೆ ಲೈಂಗಿಕ ಕಿರುಕುಳ ನೀಡಿದ್ದರು. ಈ

ಕುರಿತು ದೂರು ನೀಡಿದ್ದರು. ವರ್ಷಗಳ ಹಿಂದೆ ವಿದ್ಯಾರ್ಥಿನಿಯರ ಗುಂಪೊಂದು ಅದೇ ಸಹೋದ್ಯೋಗಿಯು ಲೈಂಗಿಕ ಕಿರುಕುಳ ನೀಡಿದ್ದರ ಕುರಿತು ದೂರು ನೀಡಿದ್ದರು. ಮಹಿಳಾ ಅಧ್ಯಾಪಕಿ ನೀಡಿದ್ದ ದೂರಿನಿಂದಾಗಿ ಮತ್ತು ವಿಷಯ ಕುರಿತು ನಡೆಸಿದ ಚರ್ಚೆಯಿಂದಾಗಿ ಉತ್ತರ ಪ್ರದೇಶ ಸರ್ಕಾರವು ಒಂದು ಸುತ್ತೋಲೆಯನ್ನು ಹೊರಡಿಸಿ ರಾಜ್ಯದ ಎಲ್ಲಾ ಉಪಕುಲಪತಿಗಳು 1997ರಲ್ಲಿ ಸುಪ್ರೀಂ ಕೋರ್ಟ್ ತೀರ್ಪಿನ ಮಾರ್ಗದರ್ಶಿಗಳಿಗನುಗುಣವಾಗಿ ನಡವಳಿಕೆಯ ನಿಯಮವನ್ನು ಸ್ಥಾಪಿಸಬೇಕೆಂದು ಹೇಳಿತು.

ಸುಪ್ರೀಂ ಕೋರ್ಟಿನ ಮಾರ್ಗದರ್ಶಿಯು ಲೈಂಗಿಕ ಕಿರುಕುಳವೆಂದರೇನೆಂದು ಸಂಕ್ಷಿಪ್ತವಾಗಿ ವಿವರಿಸಿದೆ. ಸಾರ್ವಜನಿಕ, ಖಾಸಗಿ ಮತ್ತು ಅಸಂಘಟಿತ ಕ್ಷೇತ್ರಗಳಲ್ಲಿ ಮಾಲೀಕರುಗಳು ಲೈಂಗಿಕ ಕಿರುಕುಳು ಕುರಿತ ಅರಿವನ್ನು ಕೆಲಸದ ಸ್ಥಳದಲ್ಲಿ ಮೂಡಿಸುವ ಜವಾಬ್ದಾರಿ ತೆಗೆದುಕೊಳ್ಳಬೇಕು ಹಾಗೂ ಕಿರುಕುಳಕ್ಕೆ ಒಳಗಾದವರಿಗೆ ನ್ಯಾಯ ದೊರಕಿಸುವಂತಹ ವ್ಯವಸ್ಥೆಯನ್ನು ಸೃಷ್ಟಿಸಬೇಕು ಎಂದು ಮಾರ್ಗದರ್ಶಿಯಲ್ಲಿ ಹೇಳಲಾಗಿದೆ. ಲೈಂಗಿಕ ಕಿರುಕುಳವನ್ನು ತಡೆಯುವ, ನಿವಾರಿಸುವ ಕ್ರಮಗಳನ್ನು ಕೈಗೊಳ್ಳಬೇಕೆಂದು ಸ್ಪಷ್ಟವಾಗಿ ಆಜ್ಞಾಪಿಸಿದೆ. ಆ ಪ್ರಕಾರ ಒಂದು ಸಮಿತಿಯನ್ನು ರಚಿಸಬೇಕು. ಆ ಸಮಿತಿಯ ಮುಖ್ಯಸ್ಥರು ಮಹಿಳೆಯರಾಗಿರಬೇಕು, 50%ರಷ್ಟು ಮಹಿಳಾ ಪ್ರತಿನಿಧಿಗಳಿರಬೇಕು, ಹೊರಗಿನ ಜವಾಬ್ದಾರಿಯುತ ವ್ಯಕ್ತಿಯೊಬ್ಬರು (ಉದಾಹರಣೆಗೆ ಸರ್ಕಾರೇತರ ಸಂಸ್ಥೆ ಅಥವಾ ಮಹಿಳಾ ಗುಂಪು) ಸಮಿತಿಯಲ್ಲಿರಬೇಕೆಂದು ಸೂಚಿಸಲಾಗಿದೆ (ತೀರ್ಪನ್ನು ಕುರಿತು ವಿವರವಾಗಿ ಮಾನಸದ ಹಿಂದಿನ ಸಂಚಿಕೆಯಲ್ಲಿ ಪ್ರಕಟಿಸಲಾಗಿದೆ) ಆದರೆ ಇದು ಎಲ್ಲೆಡೆ ಪರಿಣಾಮಕಾರಿಯಾಗಿ ಜಾರಿಯಾಗಿಲ್ಲ. ಉದಾಹರಣೆಗೆ ಕೇರಳದ ಐ.ಎ.ಎಸ್. ಅಸೋಸಿಯೇಷನ್ ಅವರ ಪ್ರಕಾರ ನ್ಯಾಯಾಂಗ ಆಯೋಗವನ್ನು ಸ್ಥಾಪಿಸಿದ್ದು ತೀರ್ಪಿನ ಉದ್ದೇಶಕ್ಕೇ ವಿರುದ್ಧವಾಗಿ ಕೆಲಸ ಮಾಡಿತು. ಈ ಕಾರಣಕ್ಕಾಗಿಯೇ ಐ.ಎ.ಎಸ್. ಅಧಿಕಾರಿಗಳು ಆಯೋಗಕ್ಕೆ ತಮ್ಮ ಅಸಹಕಾರವನ್ನು ತೋರಿದ್ದರು.

ದೆಹಲಿ ವಿಶ್ವವಿದ್ಯಾಲಯದಲ್ಲಿ ಸುಪ್ರೀಂಕೋರ್ಟಿನ ತೀರ್ಪಿಗನುಗುಣವಾಗಿ ಸಮಿತಿಯನ್ನು ರಚಿಸಲು ತಯಾರಿ ನಡೆದಿದೆ. ಇದು ಸಾಧ್ಯವಾದದ್ದು ಸಿಬ್ಬಂದಿ ಹಾಗೂ ವಿದ್ಯಾರ್ಥಿಗಳ ಅವಿರತ ಪ್ರಯತ್ನದಿಂದಾಗಿ. ಕೇರಳ ವಿಶ್ವವಿದ್ಯಾಲಯದಲ್ಲಿ ಸಮಿತಿಯನ್ನು ರಚಿಸಲಾಗಿದೆ. ಆದರೆ ಅದು ಸುಪ್ರೀಂಕೋರ್ಟ್ ಆದೇಶಕ್ಕೆ ಅನುಗುಣವಾಗಿಲ್ಲ. ಯೂನಿವರ್ಸಿಟಿ ಗ್ರಾಂಟ್ಸ್ ಕಮಿಶನ್‌ಗೆ ಅನುಗುಣವಾಗಿ ಸಮಿತಿ ರಚಿಸಲಾಗಿದೆ. ಯಾ.ಗ್ರಾಂ.ಕ. ಆದೇಶವು ಇನ್ನು ಸುಪ್ರೀಂಕೋರ್ಟ್ ಮಾರ್ಗದರ್ಶಿಗಳನ್ನು ಅಳವಡಿಸಿಕೊಂಡಿಲ್ಲ. ಕೇರಳ ವಿಶ್ವವಿದ್ಯಾಲಯವು ರಾಜ್ಯದ ಹಲವಾರು ಮಹಿಳಾ ಸಂಘಟನೆಗಳನ್ನು ಸಂಪರ್ಕಿಸಿದೆ, ಮತ್ತು ದೆಹಲಿ ವಿಶ್ವವಿದ್ಯಾಲಯ, ಜವಹರಲಾಲ್ ನೆಹರು ವಿಶ್ವವಿದ್ಯಾಲಯಗಳ ಅನುಭವಗಳನ್ನು ಗಣನೆಗೆ ತೆಗೆದುಕೊಳ್ಳುವ ಮೂಲಕ ಸುಪ್ರೀಂ ಕೋರ್ಟ್‌ನ ತೀರ್ಪಿಗೆ ಬದ್ಧವಾಗಿದೆ.

ಲೈಂಗಿಕ ಕಿರುಕುಳ ಅನುಭವಿಸುವ ಬಹಳಷ್ಟು ಮಹಿಳೆಯರು ಲಭ್ಯವಿರುವ ಕಾನೂನಿನ ಬಗ್ಗೆ, ಸುಪ್ರೀಂ ಕೋರ್ಟಿನ ತೀರ್ಪಿನ ಬಗ್ಗೆ ಅರಿವಿಲ್ಲದವರು. ಇರುವ ಕಾನೂನನ್ನು ಉಪಯೋಗಿಸಿಕೊಂಡಿರುವವರಿಗೆ ಆಗುತ್ತಿರುವ ಅನುಭವಗಳು ಬೇರೆಯುವರಿಗೆ ಇನ್ನಷ್ಟು ಹೆದರಿಕೆ ಹುಟ್ಟಿಸುತ್ತದೆ. ಐ.ಎ.ಎಸ್. ಅಧಿಕಾರಿಗಳಂತಹವರಿಗೆ ತೊಂದರೆಯಾಗುವುದಾದರೆ ಇನ್ನು ಸಾಮಾನ್ಯ ಮಹಿಳೆಯರ ಪಾಡೇನೂ ಎಂದು ದೂರ ನೀಡಲೂ ಕೂಡ ಮಹಿಳೆಯರು ಹಿಂಜರಿಯುತ್ತಾರೆ. ಕ್ರಮ ತೆಗೆದುಕೊಳ್ಳಲು ದೂರು ನೀಡುವುದಿರಲಿ ಆ ಕುರಿತು ಬಾಯಿ ಬಿಡುವುದೇ ಕಷ್ಟಸಾಧ್ಯವಾಗಬಹುದು. ಆದ್ದರಿಂದ ಆದಷ್ಟು ಶೀಘ್ರವೇ ದೇಶದೆಲ್ಲೆಡೆ ಲೈಂಗಿಕ ಕಿರುಕುಳಕ್ಕೆ ಒಳಗಾಗಿರುವವರಿಗೆ ನ್ಯಾಯ ದೊರಕುವಂತಾಗಬೇಕಿರುವುದು ಸದ್ಯದ ತುರ್ತಾಗಿದೆ. ಸುಪ್ರೀಂ ಕೋರ್ಟಿನ ತೀರ್ಪಿನ ಕುರಿತು ಎಲ್ಲರಿಗೂ ತಿಳುವಳಿಕೆ ಮೂಡಿಸುವ ಪ್ರಯತ್ನವಾಗಬೇಕಿದೆ. ಈಗಾಗಲೆ ಎಲ್ಲ ಮುಖ್ಯಸ್ಥರಿಗೂ ತೀರ್ಪಿನ ಮಾರ್ಗದರ್ಶಿಗಳನ್ನು ಅಳವಡಿಸಲು ಸುತ್ತೋಲೆ ಕಳಿಸಲಾಗಿದೆ. ಆದರೆ ದೂರನ್ನು ಕುರಿತು ಪರಿಣಾಮಕಾರಿಯಾಗಿ ಕ್ರಮ ಜರುಗಿಸುವುದನ್ನು ಜಾರಿಗೊಳಿಸಬೇಕಾಗಿದೆ. ಈ ಎಲ್ಲಾ ಪ್ರಕ್ರಿಯೆಯನ್ನು ಕಟ್ಟುನಿಟ್ಟಾಗಿ ಗಮನಿಸುವ ಅಗತ್ಯವಿದೆ. ಇದರ ಜೊತೆಗೆ ವಿಷಯವನ್ನು ಸಾರ್ವಜನಿಕರಿಗೆ ಮಾಹಿತಿ ನೀಡುವ ಕೆಲಸವಾಗಬೇಕಿದೆ.

ಮಹಿಳೆಯರು ಮತ್ತು ಹೆಣ್ಣುಮಕ್ಕಳು ತಮ್ಮ ಹಕ್ಕುಗಳನ್ನು ಅರಿತುಕೊಂಡು ತಮ್ಮನ್ನು ತಾವು ಸಮರ್ಥಿನೆ ಮಾಡಿಕೊಳ್ಳುವುದನ್ನು ಪ್ರೋತ್ಸಾಹಿಸುವುಕ್ಕೆ ಹೆಚ್ಚು ಒತ್ತು ನೀಡಬೇಕು. ಜೊತೆಗೆ ಬಹುಮುಖ್ಯವಾಗಿ ಗಂಡಸರು ಮತ್ತು ಗಂಡುಮಕ್ಕಳನ್ನು ಲೈಂಗಿಕ ಕಿರುಕುಳದ ವಿರುದ್ಧದ ಹೋರಾಟದಲ್ಲಿ ಸಕ್ರೀಯವಾಗಿ ಪಾಲ್ಗೊಳಿಸುವ ಪ್ರಯತ್ನ ವಾಗಬೇಕು. ಅವರಿಗೆ ಲೈಂಗಿಕ ಕಿರುಕುಳ ಸಮಸ್ಯೆಯು ಗಂಭೀರತೆ, ಕಿರುಕುಳ ಉಂಟುಮಾಡುವ ಪರಿಣಾಮ ಕುರಿತು ಮನವರಿಕೆ ಮಾಡುವ

ಪ್ರಯತ್ನವಾಗಬೇಕು. ಲೈಂಗಿಕ ಕಿರುಕುಳ ನೀಡುವುದನ್ನು ವೈಯಕ್ತಿಕವಾಗಿ ವಿರೋಧಿಸುವುದಲ್ಲದೆ ಲೈಂಗಿಕ ಕಿರುಕುಳವನ್ನು ತಡೆಯುವ, ನಡೆದಾಗ ವಿರೋಧಿಸುವ, ಅಥವಾ ಕಿರುಕುಳಕ್ಕೆ ಒಳಗಾದವರಿಗೆ ನ್ಯಾಯ ಒದಗಿಸಲು ಬೆಂಬಲಿಸುವಂತ ಕಾರ್ಯಗಳ ಮೂಲಕ ಲೈಂಗಿಕ ಕಿರುಕುಳ ಮುಕ್ತ ವಾತಾವರಣ ಕಲ್ಪಿಸುವ ಪ್ರಯತ್ನದಲ್ಲಿ ಪಾಲ್ಗೊಳ್ಳಲು ಪ್ರೋತ್ಸಾಹಿಸಬೇಕು.

ದೀರ್ಘಕಾಲಿಕ ಪ್ರಯತ್ನವಾಗಿ ಪ್ರಚಲಿತವಿರುವ 'ಪುರುಷ ಅಹಂ'ದ ಮಿಥ್ಯೆಯನ್ನು ಮುರಿಯುವ ಪ್ರಯತ್ನವಾಗಬೇಕು. ಈ ಮಿಥ್ಯೆಯಿಂದಾಗಿ ಹೆಸರಿನಲ್ಲಿ ಅನೇಕ ಅಪಾಯಕಾರಿ ವರ್ತನೆಗಳು (ಪ್ರೀತಿಸದಿದ್ದರೆ ಆಸಿಡ್ ಹಾಕುವೆನ್ನುವಂತಹ) ಸಮರ್ಥಿಸಿಕೊಳ್ಳಲ್ಪಡುವುದಲ್ಲದೆ, ಸಹಜ, ಸ್ವಾಭಾವಿಕವೆಂದು ಒಪ್ಪಿತವೂ ಆಗಿಬಿಡುತ್ತವೆ. ಈ ವರ್ತನೆಗಳು ಸಹ ಲೈಂಗಿಕ ಹಿಂಸೆಯ ವಿವಿಧ ರೂಪಗಳೇ. ಆ ಕಾರಣಕ್ಕಾಗಿಯೇ ಆ ರೀತಿಯ ವರ್ತನೆಗಳನ್ನು ಖಂಡಿಸಬೇಕಾಗುತ್ತದೆ. ಈಗಾಗಲೇ ಲೈಂಗಿಕ ಕಿರುಕುಳದ ವಿರುದ್ಧ ಹೋರಾಡಲು ಅನೇಕ ಪ್ರಯತ್ನಗಳು ಹೆಚ್ಚಾಗಬೇಕು. ಲೈಂಗಿಕ ಕಿರುಕುಳ ವಿರುದ್ಧದ ಹೋರಾಟವನ್ನು ಸವಾಲೆಂಬಂತೆ ಹೆಚ್ಚಿನ ಹುಡುಗರು, ಪುರುಷರು ಸ್ವೀಕರಿಸಿದ್ದರೆ ಪುಷ್ಪರಾಜನಂತ ಯುವಕ ಅನ್ಯಾಯವಾಗಿ ಸಾಯುವುದನ್ನು ತಡೆಯಬಹುದಿತ್ತು.

*ಅಮ್ಮು ಜೋಸೆಫ್*

*ಕೃಪೆ: ಹಿಂದು ದಿನಪತ್ರಿಕೆ*

---

## ಮಡಿಯಜ್ಜಿಯ ಅಭಯ

ಸ್ವಲ್ಪ ತಾಳುಮಗು, ಬಂದೆ
ಪೂಜೆ ಮುಗಿಸಿ ಹೊಟ್ಟೆಗಿಷ್ಟುಹಾಕಿ
ಬಿಟ್ಟೆಲ್ಲ ಕೆಲಸವ ಬಂದು ಬಿಡುವೆ
ಅರೆ!
ಹೀಗೇಕೆ ನನ್ನ ನೋಡುತಿರುವೆ?
ನೀ ಹುಟ್ಟುವ ಮೊದಲಿನಿಂದಲೂ
ನಾ ಹೀಗೆ ಇರುವುದಲ್ಲವೆ?
ಕೆಂಪು ಸೀರೆ ಬೋಳಿಸಿದ ತಲೆ
ಹಣೆಗಿಷ್ಟು ಭಸ್ಮ
ಅಲಂಕಾರವೆಲ್ಲಾ ಕಳಿಸಿಬಿಟ್ಟರು
ನಿನ್ನಜ್ಜನ ಹಿಂದೇ!
ಆ ನಿನ್ನ ಮುತ್ತಜ್ಜಿ ಮರಿಯಜ್ಜಿಯರಿಗಿಂತ ಮೇಲು
ಅವರಾಗಿದ್ದರು ತಮ್ಮ ಪತಿಯ
ಚಿತೆಗೇ ಇಂಧನ
ಆದರೆ ಇನ್ನೂ ಉಳಿಸಿದ್ದಾರೆ.
ಜೀವಂತ ಶವವಾಗಿ ನನ್ನ
ಸ್ವಲ್ಪ ಆಚೆ ನೋಡು ಮಗು
ಅಡ್ಡಾಡುತ್ತಿರುವರೆ ಅವರಿವರೆಂದು
ನೆರಳು ಬಿದ್ದು ಮೈಲಿಗೆಯಾದೀತು!
ಛೀ, ಈ ಹುಳು ಶುನಕ
ಸುಳಿಯುತದೆ ಅಕ್ಕಪಕ್ಕ
ಆ ಧರ್ಮರಾಯನಿಗೂ ದಾರಿ ತೋರಿದ್ದಲ್ಲವೆ?
ಇರಲಿ ಬಿಡು,
ಏಕೆ ಅವಸರ? ಬಂದೆ ತಾಳು
ರಕ್ತಗತವಾಗಿರುವ ಈ ಸಂಪ್ರದಾಯದ ಗೋಳು
ನಮಗೆ ನಮ್ಮದೇ ಸಂಸ್ಕಾರ
ಇಲ್ಲೆಲ್ಲರ ತಿರಸ್ಕಾರ
ಅಳಿಸಲಾಗದ ಪೀಳಿಗೆಯಂತರ
ನೀನಷ್ಟೇ ಈ ಅಜ್ಜಿಗೆ ಆಧಾರ

ಸ್ವಲ್ಪವೇ ತಾಳು ಮಗು
ರಾತ್ರಿಭಜನೆ, ಪಾರಣೆ
ಚಕ್ಕುಲಿ ಉಂಡೆ ನಿನಗೂ ಕೊಡುವೆ
ನಂತರ ಬಂದು ಬೆಚ್ಚಗೆ ನಿನ್ನ
ತಬ್ಬಿ ಮಲಗುವೆ
ಹಾಕಿರಬಹುದು ಸಂಪ್ರದಾಯದ ಬೇಲಿ
ನನ್ನ ಸುತ್ತ
ಪ್ರೀತಿಗೆ ಯಾರೆಳೆದಿದ್ದಾರೆ
ದಾಟಲಾಗದ ವೃತ್ತ?

ಇಗೋ ಬಂದೆ, ತೂಕಡಿಕೆಯೆ?
ಕಣ್ಣೆಳೆಯುತಿದೆಯೆ?
ಕಾಯಲಾರೆ ನೀನು ನನ್ನ
ಕಾಯಿಸಲಾರೆ ನಾನೂ ನಿನ್ನ
ನಾಳೆಯ ದಿನ!

○ *ಪ್ರಭಾಮಣಿ ನಾಗರಾಜ, ಹಾಸನ*

# ಸಂಗೀತಾಶರ್ಮಾಳ ಭಯಾನಕ ಆತ್ಮಹತ್ಯೆ

ಇದು ಹೈದರಾಬಾದಿನಲ್ಲಿ ವಕೀಲಿ ವೃತ್ತಿ ನಡೆಸುತ್ತಿದ್ದ ಸಂಗೀತಾಶರ್ಮಾಳ ದುರ್ಭರ ಕಥೆ. ಆಕೆ ತಾನು ವಿಷ ಸೇವಿಸಿ ಆತ್ಮಹತ್ಯೆ ಮಾಡಿಕೊಳ್ಳುವ ಮುಂಚೆ ತನ್ನ ಆತ್ಮಹತ್ಯೆಗೆ ಹಿರಿಯ ವಕೀಲರು ಹಾಗೂ ಇತರ ಸಹೋದ್ಯೋಗಿಗಳು ತನಗೆ ನೀಡಿದ ಲೈಂಗಿಕ ಕಿರುಕುಳ ಹಾಗೂ ತನ್ನೊಂದಿಗೆ ಅವರು ವರ್ತಿಸುತ್ತಿದ್ದ ಅನಾಗರೀಕ ವರ್ತನೆಯೇ ಕಾರಣವೆಂದು ಪತ್ರ ಬರೆದಿಟ್ಟಿದ್ದಳು. ಪುರುಷರ ದಬ್ಬಾಳಿಕೆಯ ವಿರುದ್ಧ ಹಾಗೂ ಲಿಂಗಭೇದದ ಬಗ್ಗೆ ತಾನು ನಡೆಸಿದ ಹೋರಾಟವೇ ಕಾರಣವೆಂದು ಹೇಳಿದ್ದಾಳೆ. ಅವಳು ತುಕ್ಕುಹಿಡಿದ, ಅನಾಗರೀಕತೆಯಿಂದ ಕೂಡಿದ ಭಾರತದ ಕಾನೂನು ವ್ಯವಸ್ಥೆಯ ದುರ್ಗಮಕೋಟೆಯ ದ್ವಾರಗಳನ್ನು ಮತ್ತು ಅದರ ದೀರ್ಘ ಮೌನವನ್ನು ಪುರುಷಾಧಿಪತ್ಯದ ನಡವಳಿಕೆಗಳನ್ನು ಸ್ವಲ್ಪವಾದರೂ ಮುರಿಯುವಂತಹ ಧೈರ್ಯ ತೋರಿದಳು. ಆದರೆ ಆಶ್ಚರ್ಯಕರ ಸಂಗತಿಯೇನೆಂದರೆ ಈ ಮೌನ ಮುರಿಯುವುದರ ಮೂಲಕ ಆತ್ಮಹತ್ಯೆಯ ಇನ್ನೊಂದು ದೀರ್ಘ ಮೌನಕ್ಕೆ ಶರಣಾದುದು ಏಕೆ? ಮಹಿಳೆಯರ ಧ್ವನಿ ಹೊರಡುವುದು ಅವರು ಮೌನಕ್ಕೆ ಮೊರೆ ಹೋದ ಮೇಲೆಯೇ ಅಂದರೆ ಆತ್ಮಹತ್ಯೆಯ ನಂತರವೇ ಏಕೆ? ರೂಪಾಕನ್ವರಳು ಬೆಂಕಿಯಲ್ಲಿ ಉರಿದು ಸತಿಯಾಗಿ ಹೋದಮೇಲೆಯೇ ಸತಿಪದ್ಧತಿ ವಿರುದ್ಧ ಚರ್ಚೆ, ಭಾಷಣಗಳು ನಡೆದದ್ದೇಕೆ? ಸಾವಿನ ನಂತರವೇ ನಮ್ಮ ಆತ್ಮಸಾಕ್ಷಿ ಎಚ್ಚೆತ್ತುಕೊಳ್ಳುವುದೆ?

ಅತ್ಯಾಚಾರ, ಲೈಂಗಿಕ ದೌರ್ಜನ್ಯ ಹಾಗೂ ಕಿರುಕುಳಗಳು ಮಹಿಳೆಯರ ಜೀವನವನ್ನೇ ಅಲ್ಲೋಕಲ್ಲೋಲಗೊಳಿಸುತ್ತವೆ. ಸಾಂಸ್ಕೃತಿಕ, ಧಾರ್ಮಿಕ ಹಾಗೂ ಸಂಪ್ರದಾಯದ ಒಳನೀತಿಗಳು ಮಹಿಳೆಯರನ್ನು ಹೆದರಿಸುವುದಕ್ಕೆ ಹಾಗೂ ಆ ಮೂಲಕ ಅವರು ಮೌನಕ್ಕೆ ಶರಣಾಗುವಂತೆ ಮಾಡುವುದಕ್ಕೆ ಒಳಸಂಚನ್ನು ನಡೆಸುವಂತಹ ಮಾರ್ಗಗಳಾಗಿವೆ. ಪುರುಷರರ ಆಕ್ರಮಣಶೀಲ ನಡುನಳಿಕೆಯನ್ನು ವಿರೋಧಿಸಿ ಮಾತಾಡುವುದು ನಿಷಿದ್ಧ. ಲೈಂಗಿಕ ಕಿರುಕುಳದ ವಿರುದ್ಧ ಮೊಕದ್ದಮೆ ನಡೆಯುವಾಗ ಉದ್ದೇಶಪೂರ್ವಕವಾಗಿ ಅವಳನ್ನು ಸಂಭಾಷಣೆಗೆ ಎಳೆಯಲಾಗುತ್ತದೆ. ಅವಳು ತನ್ನನ್ನು ರಕ್ಷಿಸಿಕೊಳ್ಳಲು ಪ್ರತಿಕ್ರಿಯೆ ತೋರಲೇಬೇಕಾಗುತ್ತದೆ. ಸಂಗೀತಾ ಲೈಂಗಿಕ ಕಿರುಕುಳದ ವಿರುದ್ಧ ಮಾತಾಡಲು ಪ್ರಯತ್ನಿಸಿದಳು. ಆದರೆ ಯೋಚಿಸಲಾದ ರೀತಿಯಲ್ಲಿ ಶಬ್ದಗಳ ಜಾಲದಲ್ಲಿ ದಾರಿ ತಪ್ಪಿಸುವುದು ಈ ರೀತಿಯಲ್ಲಿದೆ. "ನಾನು ನಿನಗೆ ಹೇಳಬೇಕೆಂದುಕೊಂಡಿದ್ದೆ. ಬಹಳ ದಿನಗಳಿಂದ ನಾನು ನಿನಗೆ ಹೇಳಬೇಕೆಂದುಕೊಳ್ಳುತ್ತಿದ್ದೆ. ನನ್ನ ಹಿರಿಯ (ಸೀನಿಯರ್) ವಕೀಲರು ಸರಿಯಿಲ್ಲ. ನಾನು ಹೇಳುವುದು ನಿನಗೆ ಅರ್ಥವಾಗುತ್ತದೆಂದುಕೊಳ್ಳುವೆ. ಅವನು ಸಭ್ಯ ನಡವಳಿಕೆಯವನಲ್ಲ."

"ಏನು ಅವರೆ? ಹಾಗೆ ಹೇಳಬೇಡ, ಅವರು ಹಿರಿಯರು, ಗೌರವಾನ್ವಿತರು ಹಾಗೂ ಕುಟುಂಬ ಹೊಂದಿರುವವರು. ಅವರು ಅಸಭ್ಯವಾಗಿರಲು ಸಾಧ್ಯವೇ ಇಲ್ಲ."

"ಇಲ್ಲ, ಅವನು ನನ್ನೊಂದಿಗೆ ಅಸಭ್ಯತೆಯಿಂದಲೇ ನಡೆದುಕೊಳ್ಳುತ್ತಾನೆ."

"ಅವರು ನಿನ್ನನ್ನು ಮಲಗುವ ಕೋಣೆಗೆ ಕರೆದೊಯ್ದು ಬಾಗಿಲು ಮುಚ್ಚಿ ಅತ್ಯಾಚಾರವೆಸಗಲು ಪ್ರಯತ್ನಿಸಿದರೆ?"

"ಇಲ್ಲ, ಅದು ಹಾಗಲ್ಲ, ಆದರೆ ಅವನಾಡುವ ಮಾತು ಕತೆಗಳು, ಹಾವಭಾವಗಳೆಲ್ಲವೂ ಲೈಂಗಿಕ ದೃಷ್ಟಿಯಿಂದಲೇ ಕೂಡಿರುತ್ತಿದ್ದವು. ನಂತರ ಅವೇನು ನನಗೆ ನೀಡಿದ ಸೂಚನೆ ಯೇನೆಂದರೆ, ಅವನು ಹೇಳಿದಂತೆ ನಾನು ನಡೆದುಕೊಂಡರೆ, ಮುಖ್ಯವಾದ ಮೊಕದ್ದಮೆಗಳನ್ನು ನನಗೇ ವಹಿಸಿಕೊಡುತ್ತೇನೆಂದು ಹೇಳಿದ."

"ನೀನು ಪುರುಷ ವಕೀಲರೊಂದಿಗೆ ಕೆಲಸ ಮಾಡಬೇಕೆಂದು ತಿಳಿದಿರಲಿಲ್ಲವೆ? ನೀನು ಪುರುಷರ ನೆರಳು ಕೂಡ ನಿನ್ನ ಮೇಲೆ ಬೀಳಬಾರದೆಂದು ಇಚ್ಛಿಸಿದ್ದರೆ ಮನೆಯಲ್ಲೇ ಇರಬೇಕಿತ್ತು ಮತ್ತು ಇವೆಲ್ಲವೂ ನಿನ್ನ ಮೇಲೆ, ನಿನ್ನ ನಡವಳಿಕೆಯ ಮೇಲೆ ಅವಲಂಬಿಸಿರುತ್ತವೆ. ನೀನು ಎಲ್ಲರೊಡನೆ ಸ್ವತಂತ್ರ್ಯವಾಗಿ ಮಾತಾಡುವುದು, ಓಡಾಡುವುದು ಮಾಡಿದರೆ ಅಂದರೆ 'ಸ್ವೇಚ್ಛಾಸ್ತ್ರೀ'ಯಂತೆ ನಡೆದುಕೊಂಡರೆ, ಆಗ ಪುರುಷರು ನಿನ್ನ ನಡುವಳಿಕೆಯ ಲಾಭವನ್ನು ಪಡೆದುಕೊಳ್ಳುತ್ತಿದ್ದಾರೆಂದು ಆಪಾದನೆ ಮಾಡುವುದು ಬೇಡ. ಅವನು ಅಂತಹ 'Offer' ನೀಡಿದನೆಂತಲೇ ಇಟ್ಟುಕೊಳ್ಳೋಣ. ಆದರೇನು? ಅವನು ನಿನ್ನನ್ನು ಬಲವಂತ ಮಾಡಲಿಲ್ಲವಲ್ಲ, ಬಲವಂತ ಮಾಡಿದನೆ? ನಿನಗೆ ಕಿರುಕುಳ ಅಥವಾ ತೊಂದರೆಯಾಗುತ್ತದೆನಿಸಿದರೆ ನಿನಗಿಷ್ಟ ಬಂದಂತೆ ಹೋಗಿಬಿಡುವ ಸ್ವಾತಂತ್ರ್ಯ ನಿನಗಿತ್ತು."

ಪುರುಷ ಬಲೆಗೆ ಹಾಕಿಕೊಳ್ಳುವುದರ ಬಗ್ಗೆ, ದಾರಿ ತಪ್ಪಿಸುವುದರ ಬಗ್ಗೆ ಸಂಗೀತಾ ಚೆನ್ನಾಗಿ ಅರ್ಥೈಸಿಕೊಂಡಿದ್ದಳು.

ಪುರುಷರು ಮಾತ್ರವಲ್ಲ, ಮಹಿಳೆಯರೂ ಅವಳ ಬಗ್ಗೆ ಮಾತಾಡುತ್ತಾರೆ. ಅವಳು ಸ್ವತಂತ್ರಳು, ಶೈಕ್ಷಣಿಕವಾಗಿಸ ಬಲಳು ಮತ್ತು ತನ್ನ ವೃತ್ತಿಯಲ್ಲಿಯೂ ಯಶಸ್ಸು ಹೊಂದಿದವಳಾಗಿದ್ದು ತನಗೆ ಯಾವುದು ಬೇಕೋ ಅದನ್ನು ಆಯ್ಕೆ ಮಾಡಿಕೊಳ್ಳುವಂತಹವಾಗಿದ್ದಳು. ಪುರುಷರ ಆಟದ ನಿಯಮಗಳನ್ನು ಅರಿಯಲಿಲ್ಲ. ಅವಳು ಏಕಾಂಗಿ ವ್ಯಕ್ತಿ. ಅವಳು ಸಂಪೂರ್ಣವಾಗಿ ತನಾಗಿರುವ ಅನಾಹುತಕ್ಕೆ ಹೊಣೆಗಾರಳಾಗಿದ್ದಳು.

ಇಂದಿನ ಆಧುನಿಕ, ಸ್ವತಂತ್ರವಾಗಿರುವ ಮಹಿಳೆಯರು ಮಾಧ್ಯಮಗಳಲ್ಲಿ ಜಾಹೀರಾತು ನೀಡುವಂತಹ ಒಂದೇ ವಿಧದ ಸ್ಟಿರಿಯೋಟೈಪ್ ಆಗಿರುತ್ತಾರೆ. (ಮಾಧ್ಯಮಗಳ ಭಾಷೆಯಲ್ಲಿ, ಸ್ವಾತಂತ್ರ್ಯ ಹಾಗೂ ಸ್ವಾಭಿಮಾನ ಹೊಂದಿರುವ ಮಧ್ಯಮ ಹಾಗೂ ಮೇಲ್ವರ್ಗದ ಸದ್ಗೃಹಿಣಿ ಬಹುರಾಷ್ಟ್ರೀಯ ಕಂಪೆನಿಗಳು ತಯಾರಿಸಿದ ಎರಡು ವಿಧದ ಡಿಟರ್ಜೆಂಟ್ ಪುಡಿಗಳನ್ನು ಆಯ್ಕೆ ಮಾಡುವಲ್ಲಿಗೆ ಮಾತ್ರ ಸೀಮಿತ ಅವಳ ಸ್ವಾತಂತ್ರ್ಯತೆ. ಅವಳು ಯಾವುದೇ ಡಿಟರ್ಜೆಂಟ್ ಕೊಳ್ಳಬಾರದೆನ್ನುವ ಆಯ್ಕೆಯನ್ನು ಮಾಡಿಕೊಳ್ಳುವಂತೆಯೆ ಇಲ್ಲ) ಒಂದು ಸಮಸ್ಯೆಯೆಂದರೆ ಈ ತರಹದ ಸ್ಟಿರಿಯೋಟೈಪ್ ಸ್ವಾತಂತ್ರ್ಯದ ಸಂಭಾಷಣೆಯೂ ಸಂಪೂರ್ಣವಾಗಿ ಅಸತ್ಯವೆಂದು ಅರ್ಥಮಾಡಿಕೊಳ್ಳಲು ಸಾಧ್ಯವಾಗದೇ ಇರುವುದು. ಪುರುಷ ಪ್ರಧಾನ ಸಮಾಜ ಸ್ತ್ರೀಯರನ್ನು ಸ್ವಾತಂತ್ರ್ಯದ ಹೆಸರಿನಲ್ಲಿ ಬಂಧನಕ್ಕೊಳಪಡಿಸಲು ಹರಡಿರುವ ಕಟ್ಟುಕಥೆಗಳು.

- ನಮ್ಮ ದೇಶದಲ್ಲಿ ಪ್ರತಿ 51 ನಿಮಿಷಗಳಿಗೊಬ್ಬ ಮಹಿಳೆ ಅತ್ಯಾಚಾರಕ್ಕೊಳಗಾಗುತ್ತಾಳೆ.
- ಯಾವುದೇ ಪಟ್ಟಣವೂ ಸುರಕ್ಷಿತವಲ್ಲ. ಆರು ವರ್ಷದಿಂದ ಹಿಡಿದು 60 ವರ್ಷ ವಯಸ್ಸಿನವರೆಗಿನ ಯಾವ ಮಹಿಳೆಯೂ ಲೈಂಗಿಕ ದೌರ್ಜನ್ಯದಿಂದ ಮುಕ್ತವಾಗಿಲ್ಲ.
- ನಮ್ಮ ದೇಶದಲ್ಲಿ ಬಹಳಷ್ಟು ಮನೆಗಳಲ್ಲಿ ಹುಡುಗಿಯರು ತಮ್ಮದೇ ಕುಟುಂಬದ ಇತರ ಸದಸ್ಯರಿಂದ ಲೈಂಗಿಕ ಕಿರುಕುಳ ದೌರ್ಜನ್ಯ ಇಲ್ಲವೇ ಅತ್ಯಾಚಾರಕ್ಕೊಳಗಾಗುತ್ತಾರೆ.
- ಭಾರತದಲ್ಲಿ ಲೈಂಗಿಕ ಕಿರುಕುಳ ಇಲ್ಲದಿರುವ ಯಾವುದೇ ಕಛೇರಿಯಾಗಲೀ, ಸಂಸ್ಥೆಯಾಗಲೀ, ಕೆಲಸ ಮಾಡುವ ಸ್ಥಳವಾಗಲೀ ಇಲ್ಲ. ತುಂಬ ಸರಳವಾದ ಕಾರಣಕ್ಕೆ ನಡೆಯುವ ಯಾವುದೇ ರೀತಿಯ ವರದಕ್ಷಿಣೆ ಸಾವು ಮತ್ತು ಅತ್ಯಾಚಾರಕ್ಕೆ ಶಿಕ್ಷೆಯಿಲ್ಲವೆಂದಾಗ ನಮಗೆ ಲೈಂಗಿಕ ಕಿರುಕುಳದ ಬಗ್ಗೆ ವಿವರಣೆ ಅಥವಾ ಚರ್ಚೆ ಮಾಡಲು ಯಾವುದೇ ಭಾಷೆಯಿಲ್ಲ. ಅದರ ಬಗ್ಗೆ ಮಾತಾಡಲು ಸಾಧ್ಯವೇ ಇಲ್ಲ.

ತಲೆ ಎತ್ತದಂತೆ ಮಾಡುವ (ಅದುಮಿಟ್ಟುಕೊಳ್ಳುವ) ಭಾಷೆಯೇ ಮೌನ. ನಿಮ್ಮ ಯಾತನೆಯ ಹಾಗೂ ದೌರ್ಜನ್ಯದ ಬಗಗೆ ಮಾತಾಡಲು ಸಾಧ್ಯವಿಲ್ಲ. ಇದು ಒಂದು ನಿಯಂತ್ರಣದ ಸ್ಥಿತಿ. ಕಾನೂನಿನ ದೃಷ್ಟಿಕೋನದ ಪ್ರಕಾರ ಲೈಂಗಿಕ ದೌರ್ಜನ್ಯದ ಅರ್ಥವನ್ನು ಸೃಷ್ಟಿಸುವುದಾಗಲೀ, ವಿವರಿಸುವುದರ ಬಗ್ಗೆಯಾಗಲೀ, ನಾನು ಮಾತಾಡುತ್ತಿಲ್ಲ. ವಕೀಲರು ಇದರಲ್ಲಿ ಏನನ್ನು ಸೇರಿಸ ಬೇಕು ಅಥವಾ ಬಿಡಬೇಕು ಎಂಬುದರ ಬಗ್ಗೆ ಭಾಷಣ ಮಾಡಬಹುದು. ನ್ಯಾಯಮೂರ್ತಿಗಳು ನಿರುತ್ಸಾಹಕಾರ ನ್ಯಾಯಸ್ಥಾನದಲ್ಲಿ ವಾದವಿವಾದಗಳನ್ನು ಪರ್ಯಾಲೋಚಿಸ ಬಹುದು. ಕಾನೂನು ಕಾಲ್ಪನಿಕತೆಯ ಆಧಾರದ ಮೇಲೆ ಎಲ್ಲ ಸಾಧ್ಯತೆಗಳಿರುವುದನ್ನು ಹೇಳುತ್ತದೆ ಮತ್ತು ಯಾವ್ಯಾವುದೋ ನಿರ್ಧಾರ ತೆಗೆದುಕೊಳ್ಳುವುದಕ್ಕೆ ಬಿಡುವುದಿಲ್ಲ (ಹಾಗೆ ಹೇಳಬೇಕೆಂದರೆ ಕಾನೂನಿಲ್ಲದ ಭಾಷೆ). ಇದೆಲ್ಲವೂ ಕೇವಲ ಕಣ್ಣೊರೆಸುವ ನಾಟಕ. ಕಷ್ಟಕರವಾದ ಭಾಷೆ ಉಪಯೋಗಿಸು ವುದಕ್ಕೆ ಕಾರಣವೇನೆಂದರೆ ಸಾಮಾನ್ಯ ನಾಗರೀಕನಿಗೆ ಕಾನೂನು ಅರ್ಥವಾಗದಿರಲಿ ಎಂಬ ಉದ್ದೇಶವೆ ಹೊರತು ಬೇರೇನಿಲ್ಲ. ಸರಳವಾದ ಮೊಕದ್ದಮೆಗಳಲ್ಲೂ; ಶೀಘ್ರ ನ್ಯಾಯ ನೀಡುವುದು ಕಷ್ಟಸಾಧ್ಯ. ನ್ಯಾಯಾಲಯದಲ್ಲಿ ಸೂಕ್ಷ್ಮ ಪರಿಶೀಲನೆಗೊಳ ಪಡುವುದಿಲ್ಲ. ವಿಮರ್ಶಕರ ದೃಷ್ಟಿಯಿಂದ ನೋಡುವುದಿಲ್ಲ. ಯಾವುದೇ ಸಮಾಜದಲ್ಲಿ ಪ್ರತಿಯೊಂದು ರೀತಿನೀತಿಯೂ ಕಾನೂನಿಗೆ ಒಳಪಟ್ಟದ್ದೇ ಆಗಿರುತ್ತದೆ. ಪುರೋಹಿತಶಾಹಿ ವ್ಯವಸ್ಥೆಯೇ ಸಮಾಜದಲ್ಲಿ ಅಧಿಕಾರ ಕೇಂದ್ರೀಕೃತವಾಗಿದೆ. ಹೇಗೆ ನಾವು ಯೋಚಿಸಿದರೂ ಇಲ್ಲಿಯವರೆಗೂ ಕಾನೂನು ಪುರುಷನದೇ ಆಗಿದೆ. ಯಾವಾಗಲೂ ಕಾನೂನು ತಂದೆಯದೇ, ಪತಿಯದೇ ಹಾಗೂ ಮಗನದೇ ಆಗಿದೆ. ಆದ್ದರಿಂದ ಅಲ್ಲಿ ಮಹಿಳೆಗೆ ಯಾವುದೇ ಸ್ಥಾನವಿಲ್ಲ, ಇಲ್ಲಿಯವರೆಗೂ ಮಹಿಳೆಗೆ ಕಾನೂನಿನಲ್ಲಿ ಸ್ಥಳವಿಲ್ಲ.

ಕೆಲಸ ಮಾಡುವ ಸ್ಥಳದಲ್ಲಿ ಅವಳ ಮೇಲೆ ನಡೆಯುವ ಅನ್ಯಾಯಕ್ಕೆ ಲೈಂಗಿಕ ದೌರ್ಜನ್ಯಕ್ಕೆ ಕಾನೂನಿನಲ್ಲಿ ಹೋರಾಡಲು ಅವಳಿಂದ ಸಾಧ್ಯವಾಗುತ್ತಿಲ್ಲ. ಇದು ಹೀಗಾಗುತ್ತಿರುವುದಕ್ಕೆ ಕಾರಣವೇನೆಂದರೆ ನಮ್ಮ ಸಂಪೂರ್ಣ ವ್ಯವಸ್ಥೆ ಮತ್ತು ಅದರ ಎಲ್ಲ ರೀತಿ ನೀತಿಗಳು ಮಹಿಳೆಯನ್ನು ಒಬ್ಬ ವ್ಯಕ್ತಿ ಎಂದು ನೋಡುವುದನ್ನೇ ನಿರಾಕರಿಸುತ್ತವೆ. ಅವಳ ದೇಹವು ಅವಳ ಖಾಸಗಿ ಸ್ಥಳ. ಇಂತಹ ಜಡ್ಡುಗಟ್ಟಿದ ಸಾಮಾಜಿಕ ವ್ಯವಸ್ಥೆಯಲ್ಲಿ ಮಹಿಳೆಯ ವ್ಯಕ್ತಿಗತ ಭಾವಗಳಿಗೆ ಬೆಲೆಯಿಲ್ಲದಿದ್ದ ಮೇಲೆ, ಅವನ್ನೊಂದು ವ್ಯಕ್ತಿಯಾಗಿ ನೋಡುವುದಕ್ಕೇ ಸಾಧ್ಯವಿಲ್ಲದಿದ್ದಾಗ ಲೈಂಗಿಕ ದೌರ್ಜನ್ಯದ ಬಗ್ಗೆ ಅವಳು ತನ್ನ ಅನುಭವವನ್ನು ಹೇಗೆ

ಹೇಳಿಕೊಳ್ಳಲು ಸಾಧ್ಯ? ಎಲ್ಲ ವಿಧದ ಸಂದಂಧಗಳು, ದೈಹಿಕವಾಗಿ ಹತ್ತಿರವಾಗಲು ಪ್ರಯತ್ನಿಸುವುದು, ಚುಡಾಯಿಸುವದು, ಮೈ, ಕೈ ಮುಟ್ಟಿ ಮಾತಾಡಿಸುವುದು, ಸಂಜ್ಞೆ ಮಾಡುವುದು, ಬಲಾತ್ಕಾರ ಮಾಡುವುದು ಮತ್ತು ಮುಖಸ್ತುತಿ ಮಾಡಿ ಲೈಂಗಿಕ ಸಂಬಂಧಕ್ಕೆ ಪುಸಲಾಯಿಸುವುದು ಈ ಎಲ್ಲವನ್ನು ವೃತ್ತಿಪರವೆಂದು ತಿಳಿದುಕೊಳ್ಳುವರೇ ವಿನಃ ಒಬ್ಬ ವ್ಯಕ್ತಿಯ ಖಾಸಗಿ ಸ್ಥಳದ ಮೇಲೆ ಹಕ್ಕು ಚಲಾಯಿಸಿ ಅತಿಕ್ರಮಣ ಮಾಡುತ್ತಿದ್ದೇವೆಂದು ಭಾವಿಸುವುದಿಲ್ಲ.

ಸಹಾಯವು ಕೇವಲ ಕಾನೂನಿನ ವ್ಯಾಪ್ತಿಯಲ್ಲಿಲ್ಲ. ಲೈಂಗಿಕ ದೌರ್ಜನ್ಯವನ್ನು ವ್ಯಕ್ತಪಡಿಸುವುದಕ್ಕೆ ಭಾಷೆ ಬೇಕು. ಸಂಗೀತಾ ಬಲಾತ್ಕಾರದ ಬಲೆಯಲ್ಲಿ ಬೀಳದೇ ತನ್ನ ನೋವನ್ನು ತಿಳಿಸಲು ಹಾಗೂ ತನ್ನನ್ನು ತಾನು ಸಮರ್ಥಿಸಿಕೊಳ್ಳಲು ಬಳಸಿದ್ದ ಭಾಷೆ ಮೌನ. ಮಹಿಳೆ ಈಗ ತನ್ನ ಭಾಷೆಯನ್ನು ಕಂಡುಕೊಳ್ಳಬೇಕಿದೆ, ದೇಹದ ಗಡಿಯನ್ನು ತಿಳಿಸಲು ಹಾಗೂ ಯಾರಾದರೂ ಅದರಾಚೆ ಗಡಿ ಮೀರಿದರೆ ಅದನ್ನು ಅತಿಕ್ರಮಣವೆಂದು ತಿಳಿಸಲು, ನಿಮಗೆ ಇದರಲ್ಲಿ ಉತ್ಪ್ರೇಕ್ಷೆಯಿದೆಯೆನಿಸಿದರೆ, ನೀವು ನೆನಪಿಸಿಕೊಳ್ಳಿ, ಪುಟ್ಟಮಕ್ಕಳು, ಕಿರುಕುಳ ಬೈಯ್ಗುಳು ಹಾಗೂ ಹೊಡೆತಕ್ಕೆ ಹೇಗೆ ಒಳಗಾಗುತ್ತವೆ? ಅಶ್ಲೀಲ ಸಾಹಿತ್ಯ, ಚಿತ್ರಗಳ ರಚನೆಗಾಗಿ ಹೇಗೆ ಬಳಸಲ್ಪಡುತ್ತಾರೆ? ಅವರು ತಮಗಾದ ಅನ್ಯಾಯವನ್ನು ಹೇಳಬೇಕು, ಏನಾಯಿತೆಂಬುದನ್ನು ಹೇಳಲು ಕಲಿಯಬೇಕು.

ಕೆಲಸದ ಸ್ಥಳಗಳು ಲಿಂಗಾಧಾರಿತವಿರುವುದಿಲ್ಲ ಮತ್ತು ಅಲ್ಲಿ ಸ್ವಾತಂತ್ರ್ಯವಿರುವುದಿಲ್ಲ. ಅವುಗಳು ಪುರುಷ ಪ್ರಧಾನ ವ್ಯವಸ್ಥೆಯ ಗಟ್ಟಿ ಕಟ್ಟಡಗಳು. ಹಾಂ! ಹೌದು, ಅಲ್ಲಿ ಮಹಿಳೆಯರಿಗೆ ಆಸರೆ ನೀಡಲಾಗುತ್ತದೆ. ಪುರುಷರು ತಮ್ಮ ಮನರಂಜನೆಗಾಗಿ ಅಲ್ಲದೇ ತಮಗೆ ಹೇಗೆ ಬೇಕೋ ಹಾಗೆ ಉಪಯೋಗಿಸಿಕೊಳ್ಳುತ್ತಾರೆ. ಆದರೆ ಎಲ್ಲಿಯವರೆಗೂ ಮಹಿಳೆಯರು ಮೌನದ ಮೊರೆ ಹೋಗುವ ಒಳಸಂಚಿಗೆ ಬಲಿಯಾಗುವುದಿಲ್ಲವೋ ಮತ್ತು ಬಾಯಿ "ಮುಚ್ಚಿ ಕೊಂಡಿರುತ್ತಾರೋ", "ದೃಷ್ಟಿಸುವುದಿಲ್ಲವೋ" ಮತ್ತು "ಭಾವನೆಗಳನ್ನು ವ್ಯಕ್ತಪಡಿಸುವುದಿಲ್ಲವೋ" ಅಲ್ಲಿಯವರೆಗೂ ಪುರುಷರ ಕಬಂಧಬಾಹುಗಳಲ್ಲಿ ಸಿಲುಕಿರುತ್ತಾರೆ. ಹೇಗೆ ದರೋಡೆಯು ಬಂಡವಾಳಶಾಹಿ ಸಮಾಜದ ಒದು ಭಾಗವೋ ಹಾಗೆಯೇ ಇದೂ ಕೂಡ "ನಿಮ್ಮನ್ನು ಜಾಗತೀಕರಣ ಗೊಳಿಸಲು ನಮಗೆ ಸಹಾಯ ಮಾಡಿ" ಎಂಬ ಮಾತು ಕೇಳಿಬರುತ್ತದೆ. ಕೆಲಸದ ಸ್ಥಳಗಳಲ್ಲಿ ನಡೆಯುವ ಹೆಚ್ಚಿನ ದೌರ್ಜನ್ಯಗಳು ನಾಗರೀಕರಿಂದಲೇ ಹೆಚ್ಚಾಗಿ ನಡೆಯುತ್ತವೆ. ಆದ್ದರಿಂದ ಈ ರೀತಿಯ ಲೈಂಗಿಕ ದೌರ್ಜನ್ಯದ ನಾಗರೀಕ ವರ್ತನೆಗಳು ಹೇಗಿವೆಯೇ, ಏನಿವೆಯೋ ಹಾಗೆಯೋ ಅವುಗಳನ್ನು ಗುರುತಿಸಲು ಸಾಧ್ಯವಾಗುವುದಿಲ್ಲ.

"ಮಾನಸಿಕ ಅಸ್ವಸ್ಥತೆಯಿರುವ ಮಹಿಳೆಯು ನಯವಾದ ಮಾತಿನ ಚಾತುರ್ಯಕ್ಕೊಳಗಾಗುತ್ತಾಳೆ" ಇದು ಬಹಳ ಹಿಂದಿನಿಂದಲೂ ಮಹಿಳೆಯ ಬಗೆಗೆ ಹೇಳುವ ರೂಪಕವು. ಯಾರು ದೀರ್ಘ ಮೌನಕ್ಕೆ (ಸಾವಿಗೆ) ಬಲಾತ್ಕಾರವಾಗಿ ಒಳಗಾಗುತ್ತಾರೋ ಅಂತಹವರಿಗೆ ಈ ಮಾತು ಹೇಳಲ್ಪಡುತ್ತದೆ. ಒಂದು ವೇಳೆ ಅವಳು ಮಾತಾಡಿದರೂ ಅದು ಹುಚ್ಚು ಮಹಿಳೆಯ ಉನ್ಮತ್ತ ಸ್ಥಿತಿಯಾಗಿರುತ್ತದೆ. ನಾವು ಊಹಿಸದಿದ್ದ ರೀತಿಯಲ್ಲಿ ಹೈದರಾಬಾದಿನಲ್ಲಿ ನ್ಯಾಯಾಲಯದಲ್ಲಿ ಹೊರಬಂದಿರುವ ವಿವರಣೆಯೆಂದರೆ ಸಂಗೀತಾ ಶರ್ಮಾಳು "ಮಾನಸಿಕವಾಗಿ ಅಸ್ವಸ್ಥಳಾಗಿದ್ದಳು" ಎಂದು. ಬಹಳ ಸುಲಭವಾಗಿ ಮಹಿಳೆ ಬುದ್ಧಿ ವಿಕಲ್ಪತೆ ಹೊಂದಿದ್ದಳೆಂದು ಹೇಳುವುದು. ಸತ್ತಿರುವ ಮಹಿಳೆ ಮಾತಾಡುತ್ತಾಳೆ. ಏಕೆಂದರೆ ಅವಳು ಸಾಯುವ ಮುಂಚೆ ಆತ್ಮಹತ್ಯೆ ಪತ್ರವನ್ನು ಬರೆದಿಟ್ಟದ್ದಳು. ಅದರೊಂದಿಗೆ ಒಂದು ದೂರು ಹಾಗೂ ಒಂದು ಡೈರಿಯೂ ಇತ್ತು. ಕಾನೂನಿನ ಪ್ರಕಾರ ಅತ್ಯುತ್ತಮ ಪರಿಹಾರವೆಂದರೆ ಸತ್ತಿರುವ ಮಹಿಳೆಯ ಬುದ್ಧಿಯನ್ನು ಹಾಗೂ ಮಾನಸಿಕ ಸ್ಥಿತಿಯನ್ನು ಕ್ರಾಂತಿಕಾರಿ ಶಬ್ದಗಳಿಂದ ಉನ್ಮತ್ತ ಸ್ಥಿತಿಯಲ್ಲಿದ್ದಳೆಂದು ಸುಲಭವಾಗಿ ವರ್ಗಾಯಿಸಬಹುದು. ಎಲ್ಲಿಯವರೆಗೂ ಯಾವೊಬ್ಬ ಮಹಿಳೆ ಪಿತೃಪ್ರಧಾನ ವ್ಯವಸ್ಥೆಯ ವಿರೋಧವಾಗಿ ಮಾತಾಡುವಳೋ ಅವಳು ಅವಶ್ಯಕವಾಗಿ 'ಹುಚ್ಚಿ' ಎನ್ನಿಸಿಕೊಳ್ಳುತ್ತಾಳೆ. ಇದು ಖಂಡಿತ ಸಾಧ್ಯವಿದೆ. ಏನೆಂದರೆ, ಗೌರವಾನ್ವಿತ ನ್ಯಾಯಾಲಯವು ಸಂಗೀತಾ ಶರ್ಮಾಳು "ಮಾನಸಿಕ ಅಸ್ವಸ್ಥಳು" ಎಂಬ ತೀರ್ಪು ನೀಡಬಹುದು. ಮಹಿಳೆಯರು ಬಗೆಗಿರುವ ಎರಡು ಸಾಮಾನ್ಯ ಹೇಳಿಕೆಗಳೆಂದರೆ ಅವು : 1) ಬಿಚ್ 2) ಹಸುವಿನಂತಹವಳು (ತುಂಬ ಸಾಧು) ಭಾರತೀಯ ಕಾನೂನು ಹಾಗೂ ಕೆಲಸದ ಸ್ಥಳಗಳು ಇದಕ್ಕೆ ಇನ್ನೊಂದನ್ನು ಸೇರಿಸಿದೆ "ಮಾನಸಿಕ ಅಸ್ವಸ್ಥಳು (ಹುಚ್ಚಿ)"

ಸಂಸ್ಥೆಗಳಲ್ಲಿ ಸುತ್ತುವರೆದಿರುವ ಭ್ರಷ್ಟಚಾರವು, ಕಾನೂನು ಹೊರತುಪಡಿಸದೇ, ಹಾಳು ಮಾಡುತ್ತಿದೆ. ಮಹಿಳೆಯರು ಅವಶ್ಯಕವಾಗಿ ತಾವು ಏನೆನ್ನುವುದನ್ನು ಹಾಗೂ ಪುರುಷಾಕೃತಿ ಗಳಿಗಿಂತ ಪ್ರಬಲವಾಗಿದ್ದೇವೆಂಬುದನ್ನು ತೋರಿಸಿಕೊಡಬೇಕು. ಆಗಲೇ ದೌರ್ಜನ್ಯಕ್ಕೊಳಗಾದ ಮಹಿಳೆಯರು ದೀರ್ಘ ಮೌನವನ್ನು ಮುರಿದು ಬೇರೊಂದು ಅತಿದೀರ್ಘ ಮೌನದ ಮೊರೆ ಅಂದರೆ ಆತ್ಮಹತ್ಯೆಯ ದಾರಿ ಖಂಡಿತ ತುಳಿಯಲಾರರು.

*ಮೂಲ : ರಾಜೇಂದ್ರಚನ್ನಿ*

*ಕನ್ನಡಕ್ಕೆ : ಡಾ. ವಸುಂಧರಾ ಭೂಪತಿ*

# ನ್ಯಾಯಾಲಯದೊಳಗಿನ ಲೈಂಗಿಕ ಕಿರುಕುಳ

ನ್ಯಾಯವಾದಿಗಳು ತಮಗೆ ಜರುಗಿದ ಅನ್ಯಾಯದ ವಿರುದ್ಧ ಹೋರಾಡಲು ಅತ್ಯಂತ ಸುಸಜ್ಜಿತ ನ್ಯಾಯವ್ಯವಸ್ಥೆಯ ಉಪಯೋಗ ಪಡೆಯಬಹುದು ಎಂದು ಯಾರಿಗಾದರೂ ಅನಿಸಿದ್ದರೆ ಅದು ಸುಳ್ಳು. ಮಹಿಳಾ ನ್ಯಾಯವಾದಿಗಳು ಮತ್ತು ನ್ಯಾಯಾಂಗ ವ್ಯವಸ್ಥೆಯಲ್ಲಿ ದುಡಿಯುತ್ತಿರುವ ಮಹಿಳೆಯರು ಲೈಂಗಿಕ ಶೋಷಣಗೆ ಬಲಿಯಾಗುತ್ತಿರುವ ಅಂಶ ರಾಷ್ಟ್ರೀಯ ಮಹಿಳಾ ಆಯೋಗವು ನಡೆಸಿದ ಸಮೀಕ್ಷೆ ಮತ್ತು ಈ ವಿಷಯಕ್ಕೆ ಸಂಬಂಧಪಟ್ಟಂತೆ ಪಡೆದಿರುವ ಹಲವಾರು ದೂರಗಳಿಂದ ದೃಢಪಟ್ಟಿದೆ. ಲೈಂಗಿಕ ಕಿರುಕುಳ ಪುರುಷ ಸಹೋದ್ಯೋಗಿಗಳಿಂದ ನಡೆಯುತ್ತಿದೆ. ನ್ಯಾಯಾಧಿಕಾರಿಗಳು, ನ್ಯಾಯಾಧೀಶರು ಮತ್ತು ಮ್ಯಾಜಿಸ್ಟ್ರೇಟರು ತಮ್ಮ ಸಹೋದ್ಯೋಗಿ ಮಹಿಳೆಯರು ಅನುಭವಿಸುತ್ತಿರುವ ಈ ಬವಣೆಗೆ ನಗೆನೋಟ ಬೀರುತ್ತಿದ್ದಾರೆ ಎಂಬ ಅಪಾದನೆಗೆ ಒಳಗಾಗಿದ್ದಾರೆ. ಇದು ಅಸಹ್ಯ ಆದರೂ ನಿಜ.

* ಆಂಧ್ರ ಪ್ರದೇಶ ಉಚ್ಚನ್ಯಾಯಾಲಯದಲ್ಲಿ ವಕೀಲಿ ವೃತ್ತಿ ನಡೆಸುತ್ತಿರುವ ಸಂಗೀತ ಶರ್ಮಾ ಜೂನ್ 15 ರಂದು ಕೀಟನಾಶಕ ಕುಡಿದು ಆತ್ಮಹತ್ಯೆ ಮಾಡಿಕೊಂಡಳು. ಪುರುಷ ಸಹೋದ್ಯೋಗಿಗಳ ಮತ್ತು ಹಿರಿಯ ನ್ಯಾಯಾವಾದಿಗಳ ಸತತ ಲೈಂಗಿಕ ಕಿರುಕುಳಕ್ಕೆ ಒಳಗಾದ ಈ ಉತ್ಸಾಹಿ ಯುವ ವಕೀಲೆ ಸಂಗೀತ ಶರ್ಮಾ ಕಟ್ಟ ಕಡೆಗೆ ಸಾಯುವ ನಿರ್ಧಾರ ತೆಗೆದುಕೊಂಡಳು.
* ದೆಹಲಿಯ ತೀಸ್ ಹಜಾರಿ ನ್ಯಾಯಾಲಯದಲ್ಲಿ ವಕೀಲಿ ವೃತ್ತಿ ನಡೆಸುತ್ತಿರುವ ಸುಜಾತ ಕೂಹಿಲಿಯನ್ನು ಹಿರಿಯ ವಕೀಲರೊಬ್ಬರು ಸಾರ್ವಜನಿಕ ಸ್ಥಳದಲ್ಲಿ ದೈಹಿಕವಾಗಿ ಥಳಿಸಿದ್ದು ಹಳೆಯ ಕತೆ. ಆರು ವರುಷಗಳಿಂದ ಸುಜಾತ ಕೂಹಿಲಿಗೆ ನ್ಯಾಯ ದೊರಕಿಲ್ಲ. ನ್ಯಾಯಾಲಯದ ಆವರಣ ದಲ್ಲಿರುವ ತನ್ನ ಕಛೇರಿಯನ್ನು ಕಳೆದುಕೊಂಡು ತನ್ನ ವೃತ್ತಿಯಲ್ಲಿ ಅಪಾರ ನಷ್ಟ ಅನುಭವಿಸಿದ್ದಾಳೆ.
* ನ್ಯಾಯಾಲಯದ ಕಛೇರಿಯಲ್ಲಿ ದುಡಿಯುತ್ತಿರುವ ಮಹಿಳೆಯೊಬ್ಬಳು, ಜಿಲ್ಲಾ ನ್ಯಾಯಾಧೀಶರೇ ಲೈಂಗಿಕ ಕಿರುಕುಳ ಎಸಗಿದಲ್ಲಿ , ನ್ಯಾಯಕ್ಕಾಗಿ ಯಾರ ಹತ್ತಿರ ಬೇಡಲಿ ಎಂದು ನ್ಯಾಯಾಲದ ಕಛೇರಿಯಲ್ಲಿ ದುಡಿಯುತ್ತಿರುವ ಮಹಿಳೆಯೊಬ್ಬಳ ಕಳವಳ. ರಾಜಾಸ್ಥಾನದ ಉಚ್ಚ ನ್ಯಾಯಾಲಯದ ನ್ಯಾಯಾಧೀಶರೊಬ್ಬರನ್ನು ಇದರ ತನಿಖೆ ನಡೆಸಲು ನೇಮಿಸಿದ್ದಾರೆ.
* ಹೈದರಾಬಾದಿನಲ್ಲಿ ಮಹಿಳಾ ನ್ಯಾಯವಾದಿಯು, ಮ್ಯಾಜಿಸ್ಟ್ರೇಟರು ತನಗೆ ಲೈಂಗಿಕ ಕಿರುಕುಳ ನೀಡಿದ್ದಾರೆ ಎಂದು ಆಪಾದಿಸಿ, ಸ್ಥಳೀಯ ಬಾರ್ ಕೌನ್ಸಿಲ್‌ಗೆ ನೀಡಿದ ದೂರನ್ನು ಪರಿಗಣಿಸದೇ ಮೊಕದ್ದಮೆ ಮರಳಿ ಹಿಂದಕ್ಕೆ ಪಡೆಯುವಂತೆ ಆಗ್ರಹ ಪಡಿಸಿದ್ದಾರೆ.
* ದೆಹಲಿಯಲ್ಲಿ ಮಹಿಳಾ ನ್ಯಾಯವಾದಿಯೊಬ್ಬಳು, ಪ್ರಖ್ಯಾತ ಕಾನೂನು ತಜ್ಞ, ಹಿರಿಯ ಸರ್ವೋಚ್ಛ ನ್ಯಾಯಾಲಯದ ನ್ಯಾಯವಾದಿಯು ಲೈಂಗಿಕ, ಕಿರುಕುಳ ನೀಡಿದ್ದಾರೆ ಎಂದು ಆಪಾದಿಸಿದ್ದಾಳೆ.
* "ಸಾಕ್ಷಿ" ಸ್ವಯಂ ಸೇವಾ ಸಂಸ್ಥೆ (NGO) ಈ ವಿಷಯಕ್ಕೆ ಸಂಬಂಧಿಸಿದಂತೆ ನಡೆಸಿದ ಸಮೀಕ್ಷೆಯ ವರದಿಯಂತೆ, ಶೇ. 65 ರಷ್ಟು ಮಹಿಳಾ ನ್ಯಾಯಾವಾದಿಗಳು ತಾವು ಮೌಕಿಕ ಅಥವಾ ದೈಹಿಕ ಲೈಂಗಿಕ ಕಿರುಕುಳಕ್ಕೆ ಬಲಿಯಾಗುತ್ತಿದ್ದೇವೆ ಎಂದು ಹೇಳಿಕೆ ನೀಡಿದ್ದಾರೆ. ನ್ಯಾಯಾಂದಗ ವ್ಯವಸ್ಥೆಯ ಮುಖ್ಯರಾದ ನ್ಯಾಯಾಧೀಶರೇ ಲೈಂಗಿಕ ಕಿರುಕುಳ ನೀಡುವುದರಲ್ಲಿ ಅಗ್ರಗಣ್ಯರು ಎಂದು ಶೇ. 20ರಷ್ಟು ಮಹಿಳೆಯರು ಗುರುತಿಸಿದ್ದಾರೆ.
* ಪ್ರಖ್ಯಾತ ಕಾನೂನು ತಜ್ಞ "ಮಾನವ ಹಕ್ಕು" ಸಂಸ್ಥೆ ಯೊಂದರ ನಿರ್ದೇಶಕರು ಆಗಿರುವ ಸರ್ವೋಚ್ಚ ನ್ಯಾಯಾಲಯದಲ್ಲಿ ನ್ಯಾಯವಾದಿಗಳಾಗಿ ವೃತ್ತಿ ಮಾಡುತ್ತಿರುವ ಈತನ ಲೈಂಗಿಕ ಕುಚೇಷ್ಟೆ ಬಯಲಿಗೆ ಬಂದ ಸಂದರ್ಭದಲ್ಲಿ ನ್ಯಾಯಾಂಗ ವೃತ್ತಿಯಲ್ಲಿನ ಪುರುಷರ ಹುಳುಕು ಹೊರಬಿದ್ದಿದೆ. ತೊಂದರೆಗೆ ಒಳಪಟ್ಟ ಈ ಮಹಿಳೆ "ಮಾನವ ಹಕ್ಕುಗಳು" ಸಂಸ್ಥೆಯಲ್ಲಿ ಈತನ ಸಹೋದ್ಯೋಗಿಯಾಗಿ ದುಡಿಯುತ್ತಿರುವ ಸಮಯದಲ್ಲಿ ಸತತವಾಗಿ ತನ್ನನ್ನು ಲೈಂಗಿಕ ಕಿರುಕುಳಕ್ಕೆ ಒಳಪಡಿಸಿದ ಎಂದು ಆರೋಪಿಸಿದ್ದಾಳೆ. ಸುಮಾರು ತಿಂಗಳುಗಳ ಕಾಲ ಸತತವಾಗಿ ಹಿಂಸೆಗೊಳ್ಳಪಟ್ಟ ಈ ಮಹಿಳೆ ಕಟ್ಟ ಕಡೆಯಲ್ಲಿ ಕೆಲಸಕ್ಕೆ ರಾಜೀನಾಮೆ ಇತ್ತಿದ್ದಾಳೆ.

ತಮ್ಮಿಬ್ಬರ ನಡುವ ಒಳ್ಳೆಯ ಸಂಬಂಧ ಕುದುರಲು

'ಇದರ' ಅವಶ್ಯಕತೆ ಇದೆ ಎಂದು ತಿಳಿಸಿ, ತನ್ನ ವೈಯಕ್ತಿಕ ಲೈಂಗಿಕ ಜೀವನವನ್ನು ಯಥಾವತ್ತಾಗಿ ನನ್ನ ಸ್ನೇಹಿತೆಯೊಡನೆ ಚರ್ಚಿಸಿ ಬಣ್ಣಿಸುತ್ತಿದ್ದ. 60 ವಯಸ್ಸಿನ ಮುದುಕನ ಲೈಂಗಿಕ ಕುಚೇಷ್ಟೆ ಇಲ್ಲಿಗೇ ಮುಗಿಯಲಿಲ್ಲ. ನನ್ನ ಸ್ನೇಹಿತೆಯೊಡನೆ ಲೈಂಗಿಕ ಸಂಬಂಧಕ್ಕೆ ಕಾಡಿಸಿ ಪೀಡಿಸುತ್ತಿದ್ದ. ಈ ಕಿಲಾಡಿ ಮುದುಕ ಹಲವಾರು ಬಾರಿ ದೂರದರ್ಶನದಲ್ಲಿ ಹಲವಾರು ಸಂವಾದಗಳಲ್ಲಿ ಭಾಗಿಯಾಗಿದ್ದಾನೆ. ಆತನ ಒತ್ತಾಯಕ್ಕೆ ಮಣಿಯದೆ ಆಕೆ ಪ್ರತಿಭಟಿಸಿದಳು. ಆತನ ಕೃಷ್ಣಲೀಲೆಗೆ ಜಗ್ಗದ ಆಕೆ, ವಕೀಲಿ-ವೃತ್ತಿಯಲ್ಲಿ ಅನರ್ಹಳು ಎಂದು ಎಲ್ಲೆಲ್ಲೂ ಡಂಗುರ ಹೊಡೆದ.

ಹಿರಿಯ ಅಧಿಕಾರಿಗಳು ಹಾಗೂ ಪ್ರಖ್ಯಾತ ನ್ಯಾಯಾವಾದಿಗಳ ಸದಸ್ಯತ್ವ ಹೊಂದಿರುವ ದೆಹಲಿಯ ಒಂದು ಸಂಘಕ್ಕೆ, "ಸಹೇಲಿ" ಸ್ವಾಯತ್ತ ಮಹಿಳಾ ಸಂಘಟನೆಯು, ಈ ಘಟನೆಯ ತನಿಖೆ ನಡೆಸುವಂತೆ ಕೇಳಿವರು. ನೊಂದ ಮಹಿಳೆಗೆ ಕಿಂಚಿತ್ತಾದರೂ ನ್ಯಾಯ ಒದಗಿಸುವಲ್ಲಿ ಸಫಲವಾಗದೇ ಆಪ್ರಖ್ಯಾತ ನ್ಯಾಯವಾದಿಗಳ ಸಂಘ, ಆತ 'ಸತ್ ಪುರುಷ' ಎಂದು ತೀರ್ಮಾನಿಸಿದರು. ಇಷ್ಟಕ್ಕೆ ಬಿಡದೆ 'ಸಹೇಲಿ'ಯು ಈ ಘಟನೆಯನ್ನು ರಾಷ್ಟ್ರೀಯ ಮಹಿಳಾ ಆಯೋಗಕ್ಕೆ, ಬಾರ್ ಕೌನ್ಸಿಲ್ ಆಫ್ ಇಂಡಿಯಾಗೆ ಮತ್ತು ಸರ್ವೋಚ್ಚ ನ್ಯಾಯಾಲಯದ ಬಾರ್ ಕೌನ್ಸಿಲ್‌ಗೆ ಮೊರೆ ಹೊಕ್ಕಿದೆ.

ಈ ಬವಣೆಯಿಂದ ಹೊರಬರಲು ಆಂಧ್ರ ಪ್ರದೇಶದ ಸಂಗೀತ ಶರ್ಮಾ ತನ್ನ ಜೀವನವನ್ನೆ ಮುಡಿಪಾಗಿಟ್ಟಿದ್ದನ್ನು ಹೋಲಿಸಿದರೆ, ಈಕೆ ತನ್ನ ವೃತ್ತಿ ಜೀವನವನ್ನು ಕಳೆದುಕೊಂಡು ಅಪಾರ ನಷ್ಟ ಅನುಭವಿಸಬೇಕಾಯಿತಾದರೂ ಅದು ಮುಖ್ಯವೆನಿಸುವುದಿಲ್ಲ. ಸಂಗೀತ ಶರ್ಮಾ ತನ್ನ ಆತ್ಮಹತ್ಯೆಯ ಪತ್ರದಲ್ಲಿ, ವಿಜಯಕುಮಾರ್ ಮತ್ತು ಜಿ. ನರಸಿಂಹ ಎಂಬ ಇಬ್ಬರು ವಕೀಲರನ್ನು ಹೆಸರಿಸಿ ಜೊತೆಗೆ 15 ಜನರು ಸೇರಿ ತನಗೆ ಲೈಂಗಿಕ ಹಿಂಸೆಗೆ ಒಳಪಡಿಸಿ ಸಾವಿಗ್ಗೆ ಕಾರಣರು ಎಂದು ದಾಖಲಿಸಿದ್ದಾಳೆ.

ಪ್ರಸ್ತುತ ಸಿವಿಲ್ ಮತ್ತು ಪೀನಲ್ ಕಾನೂನು, ಕಾರ್ಯ ನಿರತವಾಗಿರುವಾಗ, ದುಡಿಯುವ ಮಹಿಳೆಗೆ ಲೈಂಗಿಕ ಶೋಷಣೆಯ ವಿಷಯದಲ್ಲಿ ಯಾವುದೇ ರೀತಿಯ ಪ್ರತ್ಯೇಕ ರಕ್ಷಣೆ ನೀಡುವುದಿಲ್ಲ. ಅಲ್ಪ ಸ್ವಲ್ಪ ರಕ್ಷಣೆ ಆಕಸ್ಮಾತ್ ದೊರೆತಲ್ಲಿ ನ್ಯಾಯಕ್ಕಾಗಿ ಹೋರಾಟ ನಡೆಸುವ ಅವಧಿ ಬಹಳ ದೀರ್ಘವಾಗಿದೆ ಎಂದು ಗುರುತಿಸಿ ಸರ್ವೋಚ್ಚ ನ್ಯಾಯಾಲಯವು ಹಲವು ವಿಧೇಯತೆಗಳನ್ನು ಸೂಚಿಸಿ, 1997ರಲ್ಲಿ ಸರ್ವೋಚ್ಚ ನ್ಯಾಯಾಲಯವು, ರಾಜಾಸ್ಥಾನದ ಸರ್ಕಾರ ಮತ್ತು ವಿಶಾಲಳ ಮೊಕದ್ದಮೆಯಲ್ಲಿ, ಮಹಿಳೆಯರು ದುಡಿಯುವ ಕ್ಷೇತ್ರಗಳಲ್ಲಿ ಲೈಂಗಿಕ ಕಿರುಕುಳ ತಹಬಂದಿಗೆ ತರಲು ವಿಶೇಷ ಕಮಿಟಿಯೊಂದನ್ನು ರಚಿಸಬೇಕು ಎಂದು ಆದೇಶ ನೀಡಿ ದುಡಿಯುವ ಮಹಿಳೆಗೆ ನ್ಯಾಯ ದೊರಕಿಸುವಲ್ಲಿ ಸರ್ವೋಚ್ಚ ನ್ಯಾಯಾಲಯ ಇತಿಹಾಸ ಸೃಷ್ಟಿಸಿದ್ದನ್ನು ಇಲ್ಲಿ ಸ್ಮರಿಸಬಹುದು. ಆದರೆ ಸರ್ವೋಚ್ಚ ನ್ಯಾಯಾಲಯದ ಬಾರ್ ಕೌನ್ಸಿಲ್ ಕೂಡ ಈ ಆದೇಶಕ್ಕೆ ಮನ್ನಣೆ ನೀಡಿಲ್ಲ. ಕೇವಲ ನಾಲ್ಕು ವರುಷಗಳ ಹಿಂದೆ ಇತಿಹಾಸ ಸೃಷ್ಟಿಸಿದ. ಈ ಆದೇಶ ಈಗಾಗಲೇ ಭಾರತದ ಇತಿಹಾಸದ ಪುಟದಲ್ಲಿ ಹುದುಗಿ ಹೋಗಿರುವುದು ವಿಪರ್ಯಾಸ.

ಹಲವು ವರುಷ ಹಿರಿಯ ವಕೀಲರ ಬಳಿ ಅನುಭವ ಪಡೆದ ನಂತರವೆ ಸ್ವಂತ ವಕೀಲಿ ವೃತ್ತಿ ಆರಂಭಿಸಲು ಸಾಧ್ಯವಾಗುವುದು. ವಕೀಲಿ ಪ್ರಪಂಚ ಪುರುಷಮಯವಾಗಿರುವುದರಿಂದ ಮಹಿಳೆ ಲೈಂಗಿಕ ಕಿರುಕುಳದ ಕಹಿ ಅನುಭವವನ್ನು ಜೊತೆಜೊತೆಯಲ್ಲಿ ಪಡೆಯುವ ಸಂಭವವಿದೆ ಎಂದು ಔಟ್‌ಲುಕ್ ಪತ್ರಿಕೆಗೆ ಹಲವಾರು ಮಹಿಳಾ ವಕೀಲರು ಹೇಳಿಕೆ ನೀಡಿದ್ದಾರೆ.

ಲೈಂಗಿಕ ಕಿರುಕುಳದ ವಿರುದ್ಧ ಸ್ವಲ್ಪ ಧ್ವನಿ ಏರಿಸಿದ ತಕ್ಷಣವೇ ದೋಷಾರೋಪಣೆ ಮಾಡಿ ಸಾರಾಸಗಟಾಗಿ 'ಕಿತಾಪತಿ' ಮಹಿಳೆಯರು ಎಂದು ಗುಲ್ಲೆಬ್ಬಿಸಿ ಪುರುಷಮಯ ವಕೀಲಿ ವೃತ್ತಿಯಲ್ಲಿ ಎಲ್ಲೂ ಸಲ್ಲದಂತೆ ಬಲೆ ಬೀಸುತ್ತಾರೆ. ಇದರಿಂದ ವೃತ್ತಿಯಲ್ಲಿ ಹಿನ್ನಡೆ ಉಂಟಾಗಿ ಅಪಾರ ನಷ್ಟ ಸಂಭವಿಸುತ್ತದೆ ಎಂದು ದೆಹಲಿಯ, ಉಚ್ಚ ನ್ಯಾಯಾಲಯದ ಮಹಿಳಾ ವಕೀಲರು ಅಭಿಪ್ರಾಯಪಟ್ಟರು.

"ಬಹುಶಃ ಈ ಕಾರಣಗಳಿಗಾಗಿಯೇ ನ್ಯಾಯಾಂಗ ವ್ಯವಸ್ಥೆಯಲ್ಲಿ ದುಡಿಯುವ ಮಹಿಳೆ ಲೈಂಗಿಕ ಶೋಷಣೆಗೆ ಒಳಗಾದರೂ ಅದು ಪ್ರಕಟವಾಗುವುದಿಲ್ಲ, ಅಥವಾ ವರದಿಯಾಗುವುದಿಲ್ಲ. ಈ ವಕೀಲಿ ಪ್ರಪಂಚ ಪುರುಷಮಯ, ಮಹಿಳಾ ವಕೀಲರಿಗೆ ಆಯ್ಕೆ ಬಹಳ ಕಡಿಮೆ. ಪುರುಷರ ತಾಳ ತಕ್ಕಂತೆ ಕುಣಿದರೆ ವೃತ್ತಿಯಲ್ಲಿ ಉಳಿದು ಬೆಳೆಯುವ ಅವಕಾಶ ದೊರೆಯುವುದು ಇಲ್ಲವೆ ವೃತ್ತಿಯಲ್ಲಿ ನಷ್ಟ ಅನುಭವಿಸ ಬೇಕಾಗುವುದು. ನಾನು ಪುರುಷರಿಂದ ಪ್ರತ್ಯೇಕ (ಹೊರತು)ವಾಗಿ ವೃತ್ತಿ ನಡೆಸುತ್ತಿದ್ದೇನೆ. ಪುರುಷರ ಸರಿ ಸಮಾನ ಅರ್ಹತೆ ನನಗಿದ್ದರೂ ನಾನು ಹಲವಾರು ಅವಕಾಶಗಳಿಂದ ವಂಚಿತ ಳಾಗಿದ್ದೇನೆ. ಹೊಸತಾಗಿ ವೃತ್ತಿ ಆರಂಭಿಸುವ ಮಹಿಳೆಗೆ ಮಾತ್ರವೇ ಲೈಂಗಿಕ ಶೋಷಣೆ ಸೀಮಿತವಾಗಿಲ್ಲ. ಈ ವೃತ್ತಿಯಲ್ಲಿ

ಅನುಭವ ಪಡೆದಿರುವ ಮಹಿಳೆಗೆ ಎಲ್ಲ ಹಂತಗಳಲ್ಲಿ ಈ ಸಮಸ್ಯೆ ಉಂಟಾಗಬಹುದು. ಸಮಸ್ಯೆಗಳ ರೂಪರೇಖೆಗಳು ಮಾತ್ರ ಬೇರೆ ಬೇರೆ ರೀತಿಯಲ್ಲಿ ಇರುತ್ತೇವೆ. ಸೇವಾ ಹಿರಿತನದ ವಿಷಯವಿರಬಹುದು ಉತ್ತಮ ನೇಮಕಾತಿ ವಿಷಯವಿರಬಹುದು, ಮೊಕದ್ದಮೆಗೆ ಸಂಬಂಧಪಟ್ಟಂತೆ ಕೇಸು ಕೊಡಿಸುವುದರಲ್ಲಿ ಇರಬಹುದು. ಉದಾಹರಣೆಗೆ: ಉಚ್ಛ ನ್ಯಾಯಾಲಯದ ಸಹಾಯಕ ಸರ್ಕಾರಿ ಪ್ಲೀಡರ್ ಹುದ್ದೆಗೆ ಬಡ್ತಿ ಕೊಡಿಸುವೆ ಎಂದು ಸಂಗೀತಳಿಗೆ, ವಿಜಯ ಕುಮಾರ್ ಎಂಬ ವಕೀಲ ಆಮಿಷ ಒಡ್ಡಿದ್ದ" ಎಂದು ದೆಹಲಿಯ ಉಚ್ಛ ನ್ಯಾಯಾಲಯದ ವಕೀಲೆ ಇಂದಿರಾ ಜೈಸಿಂಗ್ ಅಭಿಪ್ರಾಯ ಪಟ್ಟರು.

ನ್ಯಾಯಾಂಗ ಕ್ಷೇತ್ರದಲ್ಲಿ ಪುರುಷ ಪ್ರಧಾನತೆ ಎದ್ದು ಕಾಣುತ್ತದೆ. ಒತ್ತಡಕ್ಕೆ ಮಣಿದು ರಾಜಿ ಮಾಡಿ ಕೊಳ್ಳುವುದು ಸರ್ವೇ ಸಾಮಾನ್ಯ. ಶೇ. 40ರಷ್ಟು ಮಹಿಳೆಯರು ಈ ವೃತ್ತಿಯಲ್ಲಿ ಲೈಂಗಿಕ ಅತ್ಯಾಚಾರ ಅನುಭವಿಸುವ ಸಂಭವವಿದೆ ಎಂದು ಸರ್ವೋಚ್ಛ ನ್ಯಾಯಾಲಯದ ಹಿರಿಯ ವಕೀಲರಾದ ಆರ್. ಕೆ. ಸೈನಿಯವರು ಅಭಿಪ್ರಾಯಪಟ್ಟರು.

"ವಕೀಲಿ ವೃತ್ತಿ ಪ್ರಾರಂಭಿಸುವ ಹಂತದಲ್ಲಿ ಸಂಬಂಧಿಕರ ಸಹಾಯ ಇದ್ದರೆ ಎಲ್ಲವೂ ಸುಸೂತ್ರವಾಗಿ ನಡೆಯುತ್ತದೆ. ನನ್ನ ತಂದೆ ಮತ್ತು ಅಣ್ಣ ಇಬ್ಬರೂ ವಕೀಲರು. ನಾನು ವಕೀಲಿ ವೃತ್ತಿ ಪ್ರಾರಂಭಿಸುವ ವೇಳೆಗೆ ನನ್ನ ಯೌವ್ವನ ದಾಟಿತ್ತು. ಲೈಂಗಿಕ ಆಸಕ್ತರಿಗೆ ನಾನು ವಿಶೇಷ ಆಕರ್ಷಣೀಯವಾಗಿ ಕಾಣಲಿಲ್ಲ ವೇನೋ, ಪುರುಷರ ಕಾಕ ದೃಷ್ಟಿಯಿಂದ ಪಾರಾಗಿದ್ದು ನನ್ನ ಅದೃಷ್ಟವೇ ಸರಿ" ಎಂದು ವಕೀಲೆ ರಜನಿ ಅಯ್ಯರ್ ಹೇಳಿದರು.

"ಶಾಸನ ಬದ್ಧವಾಗಿರುವ ಈ ಬಾರ್ ಕೌನ್ಸಿಲ್‌ಗಳು ಸಹಾಯ ಹಸ್ತ ಬೇಡಿದಾಗ ಗಮನ ಕೊಡುವ ಗೋಜಿಗೆ ಹೋಗುವುದಿಲ್ಲ. ಹೈದರಾಬಾದಿನ ಸಂಗೀತ ಶರ್ಮಾ ದೂರು ನೀಡಿದ ಸಮಯದಲ್ಲಿ ಹಲವಾರು ಮಹಿಳೆಯರು ಲೈಂಗಿಕ ಅತ್ಯಾಚಾರ ಸಂಬಂಧಪಟ್ಟಂತೆ ಬಾರ್ ಕೌನ್ಸಿಲ್‌ಗೆ ದೂರು ನೀಡಿದ್ದರು. ದೂರು ಮರಳಿ ಹಿಂದಕ್ಕೆ ಪಡೆಯುವಂತೆ ಅರ್ಜಿದಾರರಿಗೆ ಒತ್ತಾಯ ತಂದಿದ್ದಾರೆ" ಎಂದು ಆಂಧ್ರ ಪ್ರದೇಶದ ಉಚ್ಛ ನ್ಯಾಯಾಲಯದ ವಕೀಲೆ ಕಮಲೇಶ್ವರಿ ಹೇಳಿದರು.

"ನ್ಯಾಯಾಂಗದಲ್ಲಿ ದುಡಿಯುವ ಮಹಿಳೆಗೆ ಲೈಂಗಿಕ ಅತ್ಯಾಚಾರದಿಂದ ಪರಿಹಾರ ದೊರಕಲು "ಮಹಿಳಾ ದೂರು ನಿವಾರಣೆ ಕೇಂದ್ರ"ಗಳು ರಚಿಸಬೇಕಾಗಿರುವ ತುರ್ತು ಉಂಟಾಗಿದೆ.

ಮಹಿಳಾ ರಕ್ಷಣೆಯ ನೈತಿಕ ಮೌಲ್ಯ ಹೊತ್ತಿರುವ ನಮ್ಮ ದೇಶದ ನ್ಯಾಯಾಂಗ ವ್ಯವಸ್ಥೆಯಲ್ಲಿ ದುಡಿಯುತ್ತಿರುವ ಮಹಿಳೆಯರು ಅನುಭವಿಸುತ್ತಿರುವ ಲೈಂಗಿಕ ಕಿರುಕುಳ ಇತರ ಎಲ್ಲ ದುಡಿಯುವ ಕ್ಷೇತ್ರಗಳಿಗಿಂತ ಹೆಚ್ಚು ಇರುವುದು ನಮ್ಮ ದೇಶದ ನ್ಯಾಯ ವ್ಯವಸ್ಥೆಯ ವಿಪರ್ಯಾಸ . ಈ ವ್ಯವಸ್ಥೆಯನ್ನು ಸರಿಪಡಿಸುವ ಅವಶ್ಯಕತೆ ಇದೆ" ಎಂದು ರಾಷ್ಟ್ರೀಯ ಮಹಿಳಾ ಆಯೋಗದ ಸದಸ್ಯೆ ಕೆ. ಶಾಂತಾ ರೆಡ್ಡಿಯವರು ಹೇಳಿದ್ದಾರೆ.

"ಮಹಿಳಾ ದೂರು ನಿವಾರಣೆ ಕೇಂದ್ರ" ರಚಿತವಾದಲ್ಲಿ, ಮಹಿಳೆಯರು ತೊಂದರೆಗೆ ಸಿಲುಕಿದಾಗ ಶೋಷಿಸುವವರ ವಿರುದ್ಧ ಧ್ವನಿ ಏರಿಸಿ ಅವರನ್ನು ತರಾಟೆಗೆ ತೆಗೆದುಕೊಳ್ಳಲು ಅನುಕೂಲವಾಗುವಂತಹ ವಾತಾವರಣ ಉಂಟಾಗುತ್ತದೆ. ಬಹುಶಃ ತದನಂತರ ಕಾನೂನಿನ ದೃಷ್ಟಿಯಲ್ಲಿ ಎಲ್ಲರೂ ನಿಸ್ಸಂಶಯವಾಗಿ ಸರಿಸಮಾನರು" ಎಂದು ರಜನಿ ಐಯ್ಯರ್ ನುಡಿದರು.

●

*ಕೃಪೆ : ಟೈಮ್‌ಲುಕ್*

*ಕನ್ನಡಕ್ಕೆ : ಸವಿತ ಎ.*

ಮಾನಸದ ಪ್ರಕಟಣೆ ಮಾನಸದ ಓದುಗರ ಆರ್ಥಿಕ ನೆರವನ್ನು ಅವಲಂಬಿಸಿದೆ. ಓದುಗರು ಚಂದಾ ನವೀಕರಣದ ಸೂಚನೆ ಬಂದ ಕೂಡಲೇ ಚಂದಾ ನವೀಕರಿಸಿ ಸಹಕರಿಸಬೇಕೆಂದು ಕೋರುತ್ತೇವೆ.

*ಸಂ. ಮಂಡಳಿ*

# ನೀರಿನ ನಿರ್ವಹಣೆ : ಮಹಿಳೆಯರ ಒಂದು ಯಶಸ್ವಿ ಪ್ರಯೋಗ

ಉತ್ಸಾಹದ ಚಿಲುಮೆಯಂತಿರುವ ರಾಯಕ್ವಾಲ್ ತನ್ನ ವೃದ್ಧಾಪ್ಯದಲ್ಲೂ ಧೃತಿಗೆಡದೆ, ಶ್ರಮಜೀವನವನ್ನೇ ಮೈಗೂಡಿಸಿಕೊಂಡು, ಕುಡಿಯುವ ನೀರಿಗೂ ತಾನು ಪಡುವ ಬವಣೆಯನ್ನು ತನ್ನಲ್ಲಿಗೆ ಬಂದ ನಮಗೆ ಹೇಳುತ್ತಾಳೆ - "ಬನ್ನಿ, ಅಮ್ಮಾವ್ರೆ, ನೀವು ಪ್ಯಾಟೆ ಹೆಣ್ಮಕ್ಳು ಬಂದು ನೋಡ್ಬನ್ನಿ, ನಾವು ಹ್ಯಾಗೆ ನೀರ್ ಹೊರ್ತೀವಿ, ಇದ್ನೆಲ್ಲ ನಿಮ್ಮ ಪುಸ್ತಕದಾಗೆ ಬರ್ದು ಒಸಿ ಸರ್ಕಾರಕ್ಕೆ ತಿಳಿಯೋಹ್ಗಾಗೆ ಹೇಳ್ರವ್ವ" ಹಾಗೆಯೇ ಮುಂದೆ ಸಾಗಿ, "ದಿಬ್ಬ ಹತ್ತಿ ಇಳಿದು ನೋಡಿ, ಹೇಗೆ ನೀರು ಸೋರಿ ಹೋಗ್ತಾ ಐತೆ ಆ ಕೊಡದಾಗಿಂದ, ಅದ್ರೂ ಪರ್ವ್ವಾಗಿಲ್ಲ ಬುಡಿ, ನಾನೆಳೀತೀನಿ" ಎಂದು ಹೇಳಿ ಸೋರುತ್ತಿರುವ ನೀರಿನ ಕೊಡವನ್ನು ಆಳವಾದ ಬಾವಿಯಿಂದ ಎಳೆದು, ಕೆಳಗಿಡುತ್ತಾಳೆ. ಆಕೆಯ ಉತ್ಸಾಹವನ್ನು ನೋಡಿ ಭೇಷ್ ಎನ್ನಬೇಕೋ ಅಥವಾ ಅದರೊಡನೆ ಅಯ್ಯೋ ಪಾಪ! ಎನಬೇಕೋ ತೋರದೆ ಬೆರಗುಗಣ್ಣುಗಳಿಂದ ಎವೆ ಇಕ್ಕದೆ ನೋಡುತ್ತಿರುವಾಗ ಅವಳು ಹೀಗೆ ಹೇಳುತ್ತಾಳೆ - "ಅಮ್ಮಾವ್ರೆ ನೀವು ಬರೇ ನಮ್ಮ ಹತ್ರ ಎಲ್ಲಾ ತಿಳ್ಕಂಡು, ಅದ್ನೆಲ್ಲ ಪುಸ್ತಕದಾಗೆ ಬರೀತೀರಿ, ಆದ್ರೆ, ನನ್ನ ಹತ್ರ ಬನ್ನಿ, ನಿಮಗೆ ದಾರಿತೋರಿಸ್ತೀವಿ, ಆಮ್ಯಾಕೆ ನಿಮ್ಹತ್ರ ಕಾಸು ಕೇಳ್ತೀನಿ" ಈಕೆ ತಮಾಷೆ ಮಾಡುತ್ತಿರುವಳೋ ಏನೋ ಎಂದು ಯೋಚಿಸುತ್ತಿರುವಷ್ಟರಲ್ಲಿ, ನಮಗೆ ಅದು ಹಾಸ್ಯವಲ್ಲ ವೆಂದು ಮನವರಿಕೆಯಾಗುತ್ತದೆ. ಅಲ್ಲಿಯ ಹಳ್ಳಿಯ ಜನ ಉಣ್ಣೆಬಟ್ಟೆ ತಯಾರಿಸುವುದು, ಹುಲ್ಲು ಕತ್ತರಿಸಿ ಮಾರುವುದು, ಹಣ್ಣು ತರಕಾರಿಗಳನ್ನು ಬೆಳೆಯುವುದು, ಮಾರುವುದು ಇಷ್ಟೇ ಏಕೆ? ಒಂದು ಸಣ್ಣ ಉಳಿತಾಯ ಯೋಜನೆಯನ್ನು ನಡೆಸು ತ್ತಿದ್ದಾರೆ.

ಉತ್ತರ ಪ್ರದೇಶ ರಾಜ್ಯದಲ್ಲಿ 40 ಲೀಟರ್ ಅಥವಾ ಎರಡು ಸಣ್ಣ ಬಕೆಟ್‌ನೀರನ್ನು ಪ್ರತಿಯೊಬ್ಬರಿಗೂ ಸರ್ಕಾರ ನಿಗದಿಪಡಿಸಿದೆ. ಅನೇಕ ನದಿಗಳ ಆಗರವಾದ ಈ ರಾಜ್ಯದಲ್ಲಿ, ನೀರಿಗೆ ಇಷ್ಟೊಂದು ಬವಣೆ. ಪ್ರತಿವರ್ಷವೂ ಈ ರಾಜ್ಯದಲ್ಲಿ ಇಡೀ ದೇಶದ ಸರಾಸರಿ ಮಳೆಯ ಮಟ್ಟಕ್ಕಿಂತ ಹೆಚ್ಚಿನ ಮಳೆಯಾಗು ತ್ತಿದ್ದರೂ, 30% ಜನ ನೀರಿನಲ್ಲಿ ಕೊರತೆಯಿಂದ ಬಳಲು ತ್ತಿದ್ದಾರೆ. ರಾಜ್ಯದಲ್ಲಿ ನೀರಿನ ವ್ಯವಸ್ಥೆಗಾಗಿ ಧನಸಹಾಯವನ್ನು ಕೊಡಲಾಗಿದ್ದರೂ ಈ ಬರಗಾಲವೇ? ಇದಕ್ಕೆ ಕಾರಣವೆಂದರೆ, ಈ ರಾಜ್ಯದ ಗ್ರಾಮೀಣ ಪ್ರದೇಶದಲ್ಲಿಯ ನೀರು ಪೂರೈಕೆ ಯೋಜನೆಗಳ 2/3ರಷ್ಟು ಭಾಗ ಗರ್ವಾಲ್‌ನಲ್ಲಿ ನೀರಿನ ಓಟ್ ಹೆಚ್ಚಾಗಿದೆ. ಎಷ್ಟೋ ಯುಗಗಳಿಂದ ತುಂಬಿ ಹರಿಯುತ್ತಿದ್ದ ಕೆರೆಕಟ್ಟೆಗಳ ನೀರನ್ನು ಹಿಂಗಿಸುವುದರಿಂದಲೂ ಮತ್ತು ನಗರೀಕರಣದಿಂದಲೂ ಈಗ ಬತ್ತಿಹೋಗಿವೆ. ಈ ಮಧ್ಯೆ, ಹಳ್ಳಿಗಳಲ್ಲೂ, ಗುಡ್ಡಗಾಡುಗಳಲ್ಲೂ ಪ್ರಜಾಸಂಖ್ಯೆ ಹೆಚ್ಚಿದೆ. ಇದರ ಪರಿಣಾಮವಾಗಿ, ಮಹಿಳೆಯರು ದಿನಕ್ಕೆ ಮೂರು-ನಾಲ್ಕು ಗಂಟೆಗಳ ಕಾಲ ನಡೆದು, ಅಷ್ಟೋ ಇಷ್ಟೋ ನೀರನ್ನು ಹೊತ್ತುತರುವಂತಾಗಿದೆ. ಶುಚಿತ್ವ ಮತ್ತು ಆರೋಗ್ಯದ ಮಟ್ಟ (ಕೇವಲ 2.5%ರಷ್ಟು ಇಡೀ ರಾಜ್ಯದ ಪ್ರಜಾಸಂಖ್ಯೆಯು ಸರಿಯಾದ ಮತ್ತು ಶುಚಿಯಾದ ಶೌಚಾಲಯಗಳನ್ನು ಬಳಸುತ್ತಾರೆ) ಬಹಳಷ್ಟು ಕುಂದಿದೆ ಮತ್ತು ಬಡತನ ಹೆಚ್ಚಾಗಿ ಅವರ ವಾರ್ಷಿಕ ಆದಾಯದ ಮಟ್ಟವೂ ಸಹ ಬಹಳಷ್ಟು ಇಳಿದಿದೆ.

ಭಾರತ ದೇಶದಲ್ಲಿ, ಅನೇಕ ಅಭಿವೃದ್ಧಿ ಕಾರ್ಯಗಳನ್ನು ಕೈಗೊಂಡಾಗಲೂ ಅದರ ಕಾರ್ಯ ಮತ್ತು ಅದನ್ನು ನಿಭಾಯಿಸಿಕೊಂಡು ಹೋಗುವುದು ಬಹಳ ಚಿಂತಾಜನಕ ವಾಗಿದೆ. ಇದಕ್ಕಾಗಿ ಮೀಸಲಾದ ಹಣವೂ ಸಹ ಬಹಳ ಕಡಿಮೆ. ಇಲ್ಲವೇ, ಈ ಹಣವು ಸಂಬಂಧಪಟ್ಟ ಅಧಿಕಾರಿಗಳ ಹಸ್ತವನ್ನು ಸೇರುವ ಮೊದಲೇ ಇಲ್ಲವಾಗುತ್ತದೆ. ಅಥವಾ ಬೇರೆ ಅಧಿಕಾರಿಗಳ ಕಡೆಗೆ ವರ್ಗಾಯಿಸಲ್ಪಡುತ್ತದೆ. ಇವಕ್ಕೆ ವಿಕೇಂದ್ರಿಕರಿಸುವುದೊಂದೇ ಪರಿಹಾರವಾರವಾಗಿದೆ. ಇದರಲ್ಲೂ, ಉ.ಪ್ರ. ಸೇವಾ ಗುಂಪುಗಳ ಕೌಶಲ್ಯ ಮತ್ತು ಶ್ರಮದಿಂದ ಇದು ಪೂರ್ಣಗೊಳ್ಳಬೇಕಾಗಿದೆ. ಉದಾಹರಣೆಗೆ, ಆ ರಾಜ್ಯವು ಸ್ಥಾಪಿಸಿದ ಎಲ್ಲಾ ಮಾನವಚಾಲಿತ ನೀರಿನ ಪಂಪುಗಳನ್ನು ಪಂಚಾಯತಿಯಂತಹ ಸ್ಥಳೀಯ ಸಂಸ್ಥೆಗಳಿಗೆ ಅಧರ ನಿರ್ವಹಣೆಯೊಂದಿಗೆ ವರ್ಗಾಯಿಸಬೇಕು. ಆದರೆ, ಹಣ ಹೂಡಿಕೆಯೂ ಸಹ ಈ ಸಮಾಜ ಸೇವಾ ದಳಗಳ ಕೈಯಲ್ಲೇ ಇದ್ದರೆ ಆಗ ಇನ್ನೂ ಉತ್ತಮವಲ್ಲವೇ?

ಈ ಪ್ರಯೋಗವು ಭೀಮೆಕಲ್‌ನಿಂದ (ಅಂದರೆ ಕುಮಾಊನ್ ಬೆಟ್ಟದಲ್ಲಿ) 45 ಕಿ.ಮೀ. ದೂರದ ಸಣ್ಣ ಹಳ್ಳಿಯೊಂದರಲ್ಲಿ ಅತಿ ದೊಡ್ಡ ಅದ್ಭುತವನ್ನೇ ಮಾಡಿದೆ. ಪಟ್ಟಣಗಳಲ್ಲಿ ನಿಗಧಿತವಾದ ಮಟ್ಟವನ್ನು ತಲುಪುವುದರಲ್ಲೂ ಸಹ ಅನೇಕ ಸಾಧನೆಗಳನ್ನು ಮಾಡಿದೆ.

ಯೋಜನೆಗಳ ಉದ್ದೇಶಗಳಲ್ಲಿ ತಾವೇ ನೀರಿನ ಪೂರೈಕೆಯನ್ನು ಕೈಗೊಳ್ಳುವುದು ಒಂದಾಗಿದೆ. ಇದರಂತೆ

ವಿಶ್ವಬ್ಯಾಂಕಿನ 63.7 ಮಿಲಿಯನ್ ಡಾಲರ್‌ಗಳಷ್ಟು ಧನಸಹಾಯವನ್ನು ಪಡೆದ ಉ. ಪ್ರ. ಗ್ರಾಮೀಣ ನೀರು ಪೂರೈಕೆ ಮತ್ತು ಪರಿಸರ ಸ್ವಾಸ್ಥ್ಯಪರಿಪಾಲನಾ ಯೋಜನೆ 1996-2002 ಇಸವಿಯವರೆಗೆ ಹಮ್ಮಿಕೊಂಡಿದೆ.

ಇದರೊಂದಿಗೆ, ಹಳ್ಳಿಗಳಲ್ಲಿ, ಮಹಿಳೆಯರಿಗೆ ತಿಳುವಳಿಕೆಯನ್ನು ಹೆಚ್ಚಿಸುವುದು ಮತ್ತು ಹಣವನ್ನು ಸಂಪಾದಿಸುವುದಲ್ಲದೆ, ವಿದ್ಯುಚ್ಛಾಲಿತ ಸಲಕರಣೆಗಳನ್ನು ಅವುಗಳ ತಾಂತ್ರಿಕ ಕೌಶಲ್ಯದ ವಿವರಗಳನ್ನು ತಿಳಿಸಿಕೊಡುವ ಯೋಜನೆಯನ್ನು ಹಾಕಿಕೊಂಡಿದೆ. ಈ ವಿಷಯವು ನಿಜವಾಗಲೂ ಮೆಚ್ಚಲೇಬೇಕು. ಆದರೆ, ವಿದ್ಯುಚ್ಛಾಲಿತ ಯಂತ್ರಗಳನ್ನು ಬಳಸುವ ವಿಷಯದಲ್ಲಿ ಯಾವ ಯಾವ ಹಳ್ಳಿಗಳಲ್ಲಿ ಇದನ್ನು ಸ್ಥಾಪಿಸಬೇಕು ಎಂಬುದನ್ನು ನಿರ್ಧರಿಸಬೇಕಾಗಿದೆ. ಅಲ್ಲದೆ, ನೀರಿನ ಪ್ರಮಾಣ ಮತ್ತು ನೀರನ್ನು ಹರಿಸುವ ವಿಧಾನಗಳು ಇಲ್ಲಿ ಗಮನಿಸಬೇಕಾದ ಅಂಶಗಳು. ಇದರ ಜೊತೆಗೆ ನೀರಿನ ಪೂರೈಕೆ ಇದೆಯೇ ಅಥವಾ ಇಲ್ಲದಿದ್ದಲ್ಲಿ ಅದರ ಬೇಡಿಕೆಯ ಪ್ರಮಾಣ ಇವುಗಳನ್ನೂ ಗಮನದಲ್ಲಿಟ್ಟುಕೊಳ್ಳಬೇಕು.

ಉ. ಪ್ರದೇಶದ 19 ಜಿಲ್ಲೆಗಳಿಗೆ ಅದರಲ್ಲೂ ಗುಡ್ಡಗಾಡು ಮತ್ತು ಬಂದೇಲ್ಖಂಡ್ ಪ್ರದೇಶಕ್ಕೆ ನೀರಿನ ಪೂರೈಕೆ ಮಾಡುವಲ್ಲಿ ಅಲ್ಲಿಯ ಜನರೇ ಶೇ. 10ರಷ್ಟು ಖರ್ಚನ್ನು ಭರಿಸಬೇಕಾಗುತ್ತದೆ. ಉದಾ: ಬೆಟ್ಟದ ಪೈಪ್‌ಲೈನ್ ಯೋಜನೆಗೆ, ಶೇ. 1ರಷ್ಟು ನಗದು ಬೆಲೆಯನ್ನು ಅದರ ಕಾರ್ಯಾಚರಣೆಯ ಸಂದರ್ಭದಲ್ಲಿ ಒದಗುವ ಖರ್ಚು (ಅಂದರೆ Operation & maintenance) ಮತ್ತು ಇದಕ್ಕಾಗಿ ತೋಡಿದ ಹಳ್ಳಗಳನ್ನು ಮುಚ್ಚುವುದು ಆಗುವ ಖರ್ಚನ್ನೂ ಸಹ ಗ್ರಾಮಸ್ಥರೇ ವಹಿಸಿಕೊಳ್ಳಬೇಕಾಗುತ್ತದೆ. ಹ್ಯಾಂಡ್‌ಪಂಪ್‌ಗಳನ್ನು ಜೋಡಿಸುವ ಕಾರ್ಯಕ್ರಮದಲ್ಲಿ, ಮಳೆನೀರನ್ನು ಹಾಯಿಸುವುದು, ಕ್ರಮಕ್ರಮವಾಗಿ ಬೇರೆ ಬೇರೆ ದಿಕ್ಕಿಗೆ ಹಾಯಿಸುವುದು ಅಥವಾ ಇದರ ಮಿಶ್ರಯೋಜನೆಗಾಗಿ ಶೇ. 1 ರಷ್ಟು ಹಣವನ್ನು ನಗದಾಗಿಯೂ, 9%ರಷ್ಟು ಹಣವನ್ನು ಮೂಲಬೆಲೆಯಾಗಿಯೂ ಮತ್ತು ಕೂಲಿ ನೀಡುವುದಕ್ಕೂ ತೆರಬೇಕಾಗುತ್ತದೆ. ಬಂದೇಲ್ಖಂಡದ ಗ್ರಾಮಸ್ಥರು 20% ಹಣವನ್ನು ಮೊದಲು ನೀಡುವುದಲ್ಲದೆ, ನಂತರ 8%ರಷ್ಟು ಹಣವನ್ನು ನಂತರ ತೆರುತ್ತಾರೆ. ಗೃಹ ಬಳಕೆಗಾಗಿ ನೀರಿನ ಪೂರೈಕೆಗೆ ಉ. ಪ್ರದೇಶದ ರಾಜ್ಯ ಸರ್ಕಾರವು ಸಹಾಯಧನ (subsidy)ಯನ್ನು ನೀಡುತ್ತಿದೆ. (ಪರಿಶಿಷ್ಟಜಾತಿ / ಪರಿಶಿಷ್ಟ ವರ್ಗವೂ ಒಳಗೊಂಡಂತೆ ಬಡತನ ಮಟ್ಟದಿಂದ ಕೆಳಗಿನವರೆಂದೂ, ಬಡತನದ ಮಟ್ಟದಿಂದ ಮೇಲಿನವರೆಂದೂ ವಿಂಗಡಿಸಲಾಗಿದೆ).

1998ರ ಇಲ್ಲಿಯ ಕುಡಿಯುವ ನೀರಿನ ಪೂರೈಕೆ ಮತ್ತು ಒಳಚರಂಡಿ ಯೋಜನೆಯನ್ನು 21/2 ವರ್ಷಗಳಲ್ಲಿ ಪೂರ್ಣಗೊಂಡು, ಅದು ಈಗ (O & M) ಕಾರ್ಯಾಚರಣೆಯ ಮಟ್ಟವನ್ನು ತಲುಪಿದೆ. ಇದಕ್ಕಾಗಿ ಪ್ರತಿಯೊಂದು ಕುಟುಂಬವೂ ಸಹ ವಾರ್ಷಿಕ ಖರ್ಚಿಗಾಗಿ ರೂ. 9,650/-ನ್ನು ನೀಡುತ್ತಿದೆ. ನೀರು ಪೂರೈಕೆ ಮತ್ತು ಸ್ವಾಸ್ಥ್ಯರಕ್ಷಣೆಯ ವೆಚ್ಚ ರೂ. 13.5 ಲಕ್ಷ ತಲುಪಿದೆ. ನೀರು ಮತ್ತು ಜನತೆಯ ಅಭಿವೃದ್ಧಿಗಾಗಿ ಯೋಜನೆಯು ರೂ. 77.357/-ನ್ನು ತಲುಪಿದೆ. ಜಿಲ್ಲಾ ಸ್ವಜಲ ಕಾರ್ಯಕ್ರಮದ ಮ್ಯಾನೇಜರ್ ಆದ ಶ್ರೀ ಅರುಣ್ ತ್ಯಾಗಿ ಯವರು ಹೇಳುವಂತೆ, ಸಮಗ್ರ ಯೋಜನೆಗಾಗಿ ರೂ. 7.6 ಮಿಲಿಯನ್ ಅಥವಾ ಇಡೀ ಉ. ಪ್ರ. ರಾಜ್ಯದ ಕೊಡುಗೆಯು ಎರಡರಷ್ಟು ಬೇಕಾಗಿದೆ. ಇದಕ್ಕಾಗಿ ವಿಶ್ವಬ್ಯಾಂಕ್ ಉಳಿದ ಮೊತ್ತವನ್ನು ನೀಡುತ್ತಿದೆ.

ಸಿಮಾಯೆಲ್‌ನ ಗ್ರಾಮಸ್ಥರಿಗೆ ಈ ಯೋಜನೆ ಎಷ್ಟು ಪ್ರಯೋಜನಕಾರಿಯಾಗಿದೆ? ಇದನ್ನು ಗ್ರಾಮಸ್ಥರು ತಾವೇ ತಮಗೆ ಎಷ್ಟು ಪ್ರಮಾಣದ ನೀರಿನ ಪೂರೈಕೆ ಅಗತ್ಯ ಮತ್ತು ಅದನ್ನು ಸಾಧಿಸಲು ತಗಲುವ ವೆಚ್ಚ ಮತ್ತು ತಮ್ಮ ಆರ್ಥಿಕ ಸಾಮರ್ಥ್ಯಗಳನ್ನು ಗಮನಿಸಿ, ನಿರ್ಧರಿಸಬೇಕಾಗಿದೆ. 7-12 ಸದಸ್ಯರನ್ನು ಒಳಗೊಂಡ ಗ್ರಾಮೀಣ ನೀರು ಪೂರೈಕೆ ಮತ್ತು ಸ್ವಾಸ್ಥ್ಯಪರಿಪಾಲನಾ ಸಮಿತಿಯು ಆರೋಗ್ಯ ಮತ್ತು ಶುಚಿತ್ವದ ವಿಷಯವಾಗಿ ನಿರ್ಧರಿಸುತ್ತದೆ. ಈ ಸಮಿತಿಯು ಮಹಿಳೆ ಯರಿಂದಲೂ, ಪರಿಶಿಷ್ಟಜಾತಿ/ ಪರಿಶಿಷ್ಟ ವರ್ಗ ದವರಿಂದಲೂ ಕೂಡಿದೆ. 11 ಜನ ಸದಸ್ಯರುಳ್ಳ ಸಮಾಯೆಲ್‌ನ ಸಮಿತಿಯು 4 ಜನ ಮಹಿಳೆಯರು ಒಬ್ಬ ಖಜಾಂಚಿ ಮತ್ತು ಇಬ್ಬರು ಪ.ಜಾ/ ಪ.ವ.ದ ಸದಸ್ಯರನ್ನು ಒಳಗೊಂಡಿದೆ.

ಇದರ ವೈಶಿಷ್ಟ್ಯವೆಂದರೆ ತಮ್ಮೊಳಗೆ ತಾವೇ ಸಹಾಯ ನೀಡುವ ಕಾರ್ಯಕ್ರಮ ಮತ್ತು ನೀರು ಪೂರೈಕೆ ಯೋಜನೆಯು ಮಹಿಳೆಯರಿಂದಲೇ ನಡೆದುಬಂದಿದೆ. ಅಲ್ಲದೆ, ಮಹಿಳೆಯರೇ ಹೆಚ್ಚಿನ ಚಟುವಟಿಕೆಯನ್ನು ತಮ್ಮದಾಗಿಸಿಕೊಂಡಿದ್ದಾರೆ. ಸಿಮಾಯೆಲ್‌ನಲ್ಲಿ, ಮಹಿಳೆಯೇ ಅಗ್ರಸ್ಥಾನವನ್ನು ಹೊಂದಿ ಅವಳ ಚಟುವಟಿಕೆಗಳು ಕೇಂದ್ರೀಕೃತಗೊಂಡು, ಕಾರ್ಯಗಳು ನಡೆಯುತ್ತಿವೆ. 22 ಸದಸ್ಯರನ್ನೊಳಗೊಂಡ ಶೀತಲ ಮಹಿಳಾ ಹಣ ಉಳಿತಾಯ ಸಮೂಹದಲ್ಲಿ, ಪ್ರತಿಯೊಬ್ಬ ಮಹಿಳೆಯೂ ಕೂಡ ಪ್ರತಿ ತಿಂಗಳು ರೂ. 10 ನೀಡುವುದರ ಮೂಲಕ, ಈಗ ನಿವ್ವಳ ಮೊತ್ತವು ರೂ. 14,000ವನ್ನು ತಲುಪಿದೆ. ಕೆಲವು ತಿಂಗಳುಗಳ ಹಿಂದೆ, ಒಬ್ಬ ಸದಸ್ಯೆಯ ಮಗಳ ವಿವಾಹಕ್ಕೆಂದು ರೂ. 4,000

ಸಹಾಯ ಧನವಾಗಿ ನೀಡಲಾಯಿತು. ಇದು ಇದರ ಅತಿ ಹೆಚ್ಚಿನ ಸಹಾಯ ಧನವಾಗಿದೆ.

ನೀರಿನ ಸರಬರಾಜು ಕಾಮಗಾರಿಗೆ ಧನ್ಯವಾದಗಳನ್ನು ಅರ್ಪಿಸಬೇಕು ಏಕೆಂದರೆ ಇದು ಮಹಿಳೆಯ ಸಮಯವನ್ನು ಉಳಿಸಿ ಬಹಳ ಉಪಯೋಗಕಾರಿಯಾಗಿದೆ. ಈ ಸಮಯದಲ್ಲಿ ಏನು ಮಾಡುತ್ತಾರೆಂದರೆ, ಬೀನ ಹೇಳುವಂತೆ, ಅವರು ಮಕ್ಕಳಿಗೆ ಪಾಠ ಹೇಳಿಕೊಡುವುದು, ಮನೆಯ ಮತ್ತು ಕುಟುಂಬದ ಇತರ ಕೆಲಸಗಳನ್ನು ಮಾಡುವುದು ಮತ್ತು ಹುಲ್ಲು ಕತ್ತರಿಸುವುದು ಮುಂತಾದ ಉಪಯುಕ್ತ ಕೆಲಸಗಳಲ್ಲಿ ಸಮಯವನ್ನು ಬಳಸಿಕೊಳ್ಳುತ್ತಾರೆ. ಇದಲ್ಲದೆ, ಪ್ರತಿದಿನವೂ ತಾವು ಬೆಳೆದ ಹಣ್ಣು ಮತ್ತು ತರಕಾರಿಗಳನ್ನು ಲಾರಿಯಲ್ಲಿ ಸಾಗಿಸುವುದು ಮತ್ತು ಅದನ್ನು ಚಿಲ್ಲರೆ ವ್ಯಾಪಾರಕ್ಕೆ ಸಂಬಂಧಪಟ್ಟ ಸ್ಥಳಕ್ಕೆ ರವಾನಿಸುವುದು. ಹೀಗೆ ಅನೇಕ ಕೆಲಸಗಳನ್ನೂ ಮಾಡುತ್ತಾರೆ. ಇದನ್ನು ಕುಮಾವೂನ್ ಗ್ರಾಮೀಣ ಉದ್ಯೋಗದ ಅಂಗವಾದ NGO ಚಿರಾಗ್ ಈ ಪದಾರ್ಥಗಳನ್ನು ತೆಗೆದುಕೊಳ್ಳುತ್ತದೆ. ಚಿರಾಗ್ ಸಹ ಸಿಮಾಯೆಲ್‌ನ ಸ್ವಜಲ ನೀರು ಯೋಜನೆಯ ಒಂದು ಸಹಾಯಕ ಅಂಗವಾಗಿದೆ. ಈ ಸಹಾಯಕ ಅಂಗಗಳು ಯೋಜನೆಯ ಮುಖ್ಯ ತಾಂತ್ರಿಕ ವಿಷಯಗಳನ್ನು ಅಳವಡಿಸಿಕೊಳ್ಳುವುದು, ಗ್ರಾಮೀಣ ಜನರಿಗೆ ತಿಳಿವಳಿಕೆ ನೀಡುವುದು ಮತ್ತು ಕರಾರು/ಒಪ್ಪಂದ ಪತ್ರಗಳಿಗೆ ಸಹಿ ಹಾಕುವುದರಲ್ಲಿ ಬಹಳ ಉಪಯುಕ್ತವಾಗಿವೆ.

ಸಮುದ್ರ ಮಟ್ಟದಿಂದ 2,000 ಮೀಟರ್ ಎತ್ತರದಲ್ಲಿರುವ ಸಿಟ್ಲಾ ಗ್ರಾಮದಲ್ಲಿ ಯೇಲ್‌ನಲ್ಲಿ ವಿದ್ಯಾಭ್ಯಾಸ ಪಡೆದ ಎಕ್ಸಿಕ್ಯುಟಿವ್ ಡೈರೆಕ್ಟರ್‌ದೊಂದಿಗೆ ನಡೆಸುತ್ತಿದ್ದಾರೆ. ಬೀನಾ ರಾಯಕ್ವಾಡ್‌ರ ಮನೆಯ ಅಂಗಳದಲ್ಲಿ ವ್ಯವಸಾಯಕ್ಕಾಗಿ ನೀರಿನ ಟ್ಯಾಂಕ್‌ನ್ನು ಸ್ಥಾಪಿಸಲು ಚಿರಾಗ್‌ನಿಂದ ತಾಂತ್ರಿಕ ಕೌಶಲ್ಯವನ್ನು ತೆಗೆದುಕೊಳ್ಳಲಾಗಿದೆ. ಇಂತಹ 68 ಟ್ಯಾಂಕ್ ಗಳನ್ನು ಮತ್ತು 9 ಸಮೂಹ ಪೈಪ್‌ಲೈನ್‌ಗಳನ್ನು ಒದಗಿಸ ಲಾಗಿದೆ. ತಾಂದನಿಯವರು "ಈ ಯೋಜನೆಯು 5 ಬೆಟ್ಟ ಪ್ರದೇಶದ 100 ಹಳ್ಳಿಗಳಿಗೆ ನೀರನ್ನು ಒದಗಿಸುತ್ತದೆ" ಎಂದು ಹೇಳುತ್ತಾರೆ.

ಸ್ವಜಲ ಯೋಜನೆಯಿಂದಾಗಿ ಪ್ರತಿಯೊಂದು ಕುಟುಂಬದ ಮಾಸಿಕ ಸರಾಸರಿ ಆದಾಯವು ರೂ. 1,500-2,000 ವರೆಗೂ ಇದೆ. ಸರ್ಕಾರಿ ಕಾರ್ಯಗಳಿಗಿಂತ, ಸಾಮಾಜಿಕ ಮತ್ತು ಆರ್ಥಿಕ ಅಗತ್ಯ ಸೇವೆಯನ್ನು ಸಲ್ಲಿಸುವಲ್ಲಿ ಸ್ವಜಲ ಯೋಜನೆಯ ಪರ್ಯಾಯ ವ್ಯವಸ್ಥೆಯನ್ನು ಒದಗಿಸುವಲ್ಲಿ ತನ್ನ ಸಾಮರ್ಥ್ಯವನ್ನು ತೋರಿದೆ. ಸರ್ಕಾರವು, ಈ ಸಂಬಂಧದಲ್ಲಿ ಕೇವಲ ಸಹಾಯ ನೀಡುತ್ತದೆ ಮತ್ತು NGO ಕೂಡ ಒಂದು ಆಸರೆಯಂತಾಗಿದೆ; ಈ ಸಂಸ್ಥೆಯ ಕಾರ್ಯನಿರ್ವಹಣೆ.

ಬೀನ ರಾಯಕ್ವಾಲ್‌ರು ಮುರಿದು ಹೋದ ಫುಟ್‌ಪಾತ್‌ಗಳನ್ನು ಸರಿಪಡಿಸುವ ವಿಷಯವನ್ನು ಕೈಗೆತ್ತಿಕೊಂಡಿದ್ದಾರೆ. ಚಿರಾಗ್‌ನ ಸದಸ್ಯರೊಬ್ಬರು ಆಕೆಯ ಚಟುವಟಿಕೆಯನ್ನು ಮೆಚ್ಚಿ ಮುಗುಳು ನಗುತ್ತಾ" ನೋಡೋಣ, ಫುಟ್‌ಪಾತ್‌ಗಾಗಿ ಹಾಸುಗಲ್ಲುಗಳನ್ನು ತರಲು ಏರ್ಪಾಟು ಮಾಡಲು ಸಾಧ್ಯವೇ ಎಂದು, ಆದರೆ, ಉಳಿದ ಕೆಲಸವೆಲ್ಲ ನಿಮ್ಮಿಂದಲೇ ಆಗಬೇಕು" ಎಂದು ಹೇಳುತ್ತಾರೆ. ಇದಕ್ಕೆ ಉತ್ತರವಾಗಿ, ರಾಯಕ್ವಾಲ್ ತಲೆಯಲ್ಲಾಡಿಸುತ್ತಾ ಹೇಳುತ್ತಾರೆ ಹೌದೆನ್ನುವಂತೆ. ಕೈಬೀಸಿ ಎಲ್ಲರ ಗಮನ ಸೆಳೆದು ನಗುತ್ತಾರೆ. ಸಿಮಾಯೆಲ್‌ರವರು, ಈ ಕೆಲಸದ ಪ್ರಗತಿಪಥವನ್ನು ನಿರ್ದಿಷ್ಟವಾಗಿ ತಿಳಿದಿದ್ದಾರೆ.

*ಕೃಪೆ : ಔಟ್‌ಲುಕ್*

*ಕನ್ನಡಕ್ಕೆ : ಕೆ. ವತ್ಸಲ*

## ಗಂಡು

| | | |
|---|---|---|
| ಸ್ನೇಹ, ಪ್ರೀತಿಗೆ ಪಾತ್ರನಾದ | - | ದ್ವೇಶಿ |
| ಆತ್ಮೀಯವಾಗಿ | - | ದೂರವಾಗುವವ |
| ನಂಬಿಕೆಗೆ ಪಾತ್ರನಾದ | - | ನಂಬಿಕೆ ದ್ರೋಹಿ |
| ವಿಶ್ವಾಸಕ್ಕೆ ಪಾತ್ರನಾದ | - | ಅವಿಶ್ವಾಸಿ |
| ಗುರುವಂತಿದ್ದರೂ | - | ಅಗೌರವಿಯಾದವ |
| ಧೈರ್ಯ ತುಂಬಿ | - | ಭಯೋತ್ಪಾದಕನಾದವ |
| ಮನಸ್ಸಿಗೆ ಶಾಂತಿ ತುಂಬಿದ | - | ಉಗ್ರಗಾಮಿ |
| ಬದುಕಲು ಕಲಿಸಿ | - | ಸಾಯಿಸುವವ. |

ಮೈತ್ರಿ

# ‘ದ ಸಾಂಗ್ ಆಂಡ್ ದ ಸಿಂಗರ್’- ಒಂದು ಅನ್ನಿಸಿಕೆ

○ ಶಕೂನ್

ನಾನು ಬಂದಿದ್ದೇನೆ
ಇರದಿರದ ಪ್ರಪಂಚಗಳಿಂದ
ಆಸೆಬುರುಕತನದಲ್ಲಿ ನುಂಗುತ್ತಾ
ಆನಂದ ಹಾಗೂ ನೋವನ್ನು

*(ಎ. ಕೆ. ರಾಮಾನುಜನ್-1987)*

ಆಗಸ್ಟ್‌ನ ಕೊನೆಯ ವಾರದಲ್ಲಿ ಮಹಿಳಾ ಪುಸ್ತಕದಂಗಡಿಯ ಕಲ್ಪನ ದೆಹಲಿಯ ಕಾಳಿಯವರು ಪ್ರಕಟಿಸುತ್ತಿರುವ ಸಿ. ಎಸ್. ಲಕ್ಷ್ಮಿಯವರ ಪುಸ್ತಕವನ್ನು ಓದಿ ನನ್ನ ಪ್ರತಿಕ್ರಿಯೆ/ಟೀಕೆ/ ಭಾವನೆ/ಅನ್ನಿಸಿಕೆಯನ್ನು ‘ಸ್ತ್ರೀಲೇಖ’ ಈ ಪುಸ್ತಕವನ್ನು ಬಿಡುಗಡೆಗೊಳಿಸುವ ಸಂದರ್ಭದಲ್ಲಿ ಹಂಚಿಕೊಳ್ಳಲು ಸಾಧ್ಯವೇ? ಎಂದು ಕೇಳಿದರು. ಈ ಪುಸ್ತಕ ‘ದಿ ಸಾಂಗ್ ಆಂಡ್ ದ ಸಿಂಗರ್’ ಹದಿನಾರು ಭಾರತೀಯ ಮಹಿಳಾ ಸಂಗೀತ ಗಾರ್ತಿಯರ ಕತೆಗಳನ್ನೊಳಗೊಂಡ ಒಂದು ಪುಸ್ತಕ. ಇದು ನನಗೆ ಆಸಕ್ತಿದಾಯಕ ಅನ್ನಿಸಿದ್ದರಿಂದ ನಾನು ತಕ್ಷಣವೇ ಒಪ್ಪಿಕೊಂಡೆ.

ನಾನು ತುಂಬ ಶ್ರಮದಿಂದ ಈ ಪುಸ್ತಕ ಓದಿದೆ. ಏಕೆಂದರೆ ನನಗೆ ಕೊಟ್ಟಾಗ ಇದರ ಪ್ರತಿಯ ಫಾರಂ ತುಂಬಾ ಗೊಂದಲಮಯವಾಗಿತ್ತು. ಪ್ರಕಾಶಕರ ಪ್ರತಿ ಅದಾಗಿತ್ತು. ಪ್ರತಿಯೊಂದು ಶೀಟ್‌ನಲ್ಲಿ 32 ಪುಟಗಳಿದ್ದವು. ಆದರೆ ಕ್ರಮಬದ್ಧ ಪುಟಗಳಿರಲಿಲ್ಲ. ಲಕ್ಷ್ಮಿಯನವರನ್ನು ನಾನು ಸಿನೆಮಾ ಫೆಸ್ಟಿವಲ್ ಒಂದರಲ್ಲಿ ಕಂಡಿದ್ದೆ. ಆಕೆ ‘ವಿಮೋಚನ’ ದೊಡನೆ ವಿಜ್ಞಾನದ ಬಗೆಗಿನ ಪುಸ್ತಕದ ಬಗ್ಗೆ ತಮ್ಮ ಯೋಜನೆಯನ್ನು ಹಂಚಿಕೊಂಡಿದ್ದರು. ಈಗ ನಾನು ನಿಮ್ಮೊಡನೆ ಹಂಚಿಕೊಳ್ಳುತ್ತಿರುವುದು ಸಂಗೀತದ ತತ್ವದ ಬಗ್ಗೆ ಅಥವಾ ಸಂಗೀತಗಾರರ ಬಗ್ಗೆ ಗಾಢವಾದ ಚರ್ಚೆಯಲ್ಲಿ, ಅಥವಾ ಪುಸ್ತಕದ ಬಗ್ಗೆ ದೀರ್ಘವಾದ ವಿಮರ್ಶೆಯಲ್ಲಿ ಅಥವಾ ಈ ಪುಸ್ತಕದ ಮಹಿಳೆಯರು ಮಾತನಾಡುವ ಸಂಗೀತದ ಬಗ್ಗೆ ಒಳನೋಟಗಳಲ್ಲಿ. ನಾನು ಪುಸ್ತಕಗಳ ಬಗ್ಗೆ ಅಥವಾ ಸಂಗೀತಗಾರರ ಬಗ್ಗೆ ಮಾಹಿತಿಗಳನ್ನುಳ್ಳ ವಿಮರ್ಶಕಿಯಲ್ಲ. ಈ ಪುಸ್ತಕ, ಈ ಪುಸ್ತಕಗಳ ಕತೆಗಳನ್ನು ಓದುವಾಗಿನ ನನ್ನ ಭಾವನೆಗಳು ಹಾಗೂ ಓದುತ್ತಾ ಹೋದಾಗ ನನ್ನಲ್ಲಿ ಉಂಟಾದ ಭಾವನೆಗಳ ಬಗ್ಗೆ ಇಲ್ಲಿ ನಾನು ನಿಮ್ಮೊಡನೆ ಹಂಚಿಕೊಳ್ಳುತ್ತಿದ್ದೇನೆ.

ನಾನು ಪಕ್ಷಿಯೊಂದನ್ನು ನೋಡುವಾಗ ನನ್ನ ಪ್ರಜ್ಞೆಯ ಪದರದೊಳಗಿನಿಂದಲೇ ನಾನು ಅದನ್ನು ನೋಡುತ್ತೇನೆ. ನನಗೆ ನಿಜವಾಗಿಯೂ ಆ ಪಕ್ಷಿಯ ಬಗ್ಗೆ ಅರಿವಿರುವುದಿಲ್ಲ. ಅರಿವಿರುವುದೆಂದರೆ ನನ್ನೊಳಗೆ ಬೇರುಬಿಟ್ಟ ನನ್ನ ಪ್ರಜ್ಞೆ ಮಾತ್ರ. ‘ದ ಸಾಂಗ್ ಆಂಡ್ ದ ಸಿಂಗರ್’ ಬಗ್ಗೆ ನನಗನಿಸಿದ್ದು ಹೀಗೆಯೇ. ಈ ಪುಸ್ತಕದಲ್ಲಿ ಹದಿನಾರು ಮಹಿಳೆಯರು ತಮ್ಮ ಸಂಗೀತ, ಸಮಯ, ಬದುಕುಗಳ ಬಗ್ಗೆ ಮಾತನಾಡುವಾಗ ನನಗೆ ಅವರ ಮುಖಗಳು ಹಾಗೂ ಪದಗಳು ಕಾಣಿಸಿವೆ. ಅವು ನನ್ನ ಮೌನದ ನೆನಪುಗಳು. ಮೌನ ಸಂಗೀತಕ್ಕೆ ಸಂಬಂಧಿಸಿದ ಹಾಗೆ.

ಪಕ್ಷಿಯು ನನಗೆ ಸ್ವಾತಂತ್ರ್ಯ, ಬೆಳಕು, ಚಲನೆಯ ಸಂಕೇತವಾದ ಹಾಗೆ ಈ ಹದಿನಾರು ಮಹಿಳಾ ಸಂಗೀತಗಾರರಿಗೆ ಅವರು ಬದುಕಿದ ಹಾಗೂ ಪಡೆದಿದ್ದ ಕಲೆ ಅವರಿಗೆ ಸಂಕೇತವಾಗಿದೆ ಎಂದು ನನಗೆ ಅನ್ನಿಸುತ್ತದೆ. ಎಲ್ಲರೂ ಜ್ವಲಂತ ಕಲಾವಿದರು. ಆದಾಗ್ಯೂ ಇತರ ಎಲ್ಲಾ ಕಡೆಯ ಮಹಿಳೆಯರಂತೆ ತಾಯಿ, ಸಹೋದರಿ, ವಿದ್ಯಾರ್ಥಿನಿ, ಅಜ್ಜಿ, ದಾದಿ, ಹೆಂಡತಿ, ಕಲಾವಿದೆ, ಕೆಲಸಗಾರ್ತಿ, ಉಪನ್ಯಾಸಕಿ ಹೀಗೆ ಭಿನ್ನ ಭಿನ್ನ ಪಾತ್ರಗಳನ್ನು ನಿರ್ವಹಿಸುತ್ತಿರುವ ಬದುಕಿನ ಗುಣವನ್ನು ನಮ್ಮೊಂದಿಗೆ ಹಂಚಿಕೊಂಡಿದ್ದಾರೆ. ಅವರಿಗೆ ಕಲೆಯೆಂದರೆ ಐಷಾರಾಮದಿಂದ ಕೂಡಿದ ಪ್ರಪಂಚವಲ್ಲ. ಅಥವಾ ಕಲೆಯೇ ಜಗತ್ತಲ್ಲ. ಈ ಹದಿನಾರು ಮಹಿಳೆಯರು ಹಾಗೂ ಲಕ್ಷ್ಮಿಯವರು ಈ ಪುಸ್ತಕದಲ್ಲಿ ಒಂದು ಹೊಳಪುಳ್ಳ ವೃತ್ತವನ್ನು ರೂಪಿಸುತ್ತಾರೆ. ಈ ವೃತ್ತ ಅವರ ಆತ್ಮೀಯ ಮಾತು ಹಾಗೂ ಸಂಭಾಷಣೆಗಳಿಂದ ರೂಪಿತವಾದದ್ದು. ಇದು ನಿಮ್ಮ ಸುತ್ತ ಪರಿಪಕ್ವ ಹಾಗೂ ನಿರಂತರ ಕನಸಾಗಿ ಹಸನಾಗಿ ಸುತ್ತುತ್ತದೆ.

ನೀಲಾ ಭಾಗವಾಯಿ ಸಂಗೀತವನ್ನು ಬದಲಾವಣೆಯ ಒಂದು ಮಾಧ್ಯಮವಾಗಿ ನೋಡಬೇಕೇ? ಅಥವಾ ಈ ಜಗತ್ತಿನೊಂದಿಗಿನ ಸಂಬಂಧವೆಂದು ನೋಡಬೇಕೇ ಎನ್ನುವ ತಮ್ಮ ದ್ವಂದ್ವ ಕುರಿತು ಹೇಳುವಾಗ; ತನ್ನತಾಯಿ ಸಂಗೀತಗಾರ್ತಿಯಾಗಿ ಗುರುತಿಸ ಬಹುದಾದ ಅವಕಾಶಗಳು ಬಂದಾಗ್ಯೂ ಅದನ್ನು ಆಕೆ ಬಳಸಿಕೊಳ್ಳಲಿಲ್ಲವೆಂಬ ನೋವು ಗಂಗೂಬಾಯಿಯವರಿಗೆ ಬೆಂಬಿಡದೆ ಕಾಡುವ ದುಃಖವನ್ನು ನಾವು ಅರಿತಾಗ; ವಿದ್ಯಾರವರು ಕಳೆದುಹೋದ ತಮ್ಮ ಅರ್ಧ ಬದುಕಿನ ಹುಡುಕಾಟ ನಡೆಸುವಾಗ ಹಾಗೂ ಸಂಗೀತಕ್ಕಾಗಿಯೇ ತಮ್ಮ ಸಮರ್ಪಣೆಯ ಭಾವ ಹೊಂದುವ ಮನೋಭಾವ ತೋರಿದಾಗ; ಒಳ್ಳೆಯ ಹಾಗೂ ಹೆಂಗಸಿನ ಧ್ವನಿ ಇರದ ಸಾಯಿರಾಮ್ ತಾವು

ಇವರೆಡರ ಗಡಿ ದಾಟಬೇಕಿದೆ ಎಂಬುದನ್ನು ಹಂಚಿಕೊಳ್ಳುವಾಗ; ತಂಬೂರಿಯು ಸೆನ್ಸುಯಾಲಿಟಿ ದೇಹವನ್ನು ಗಡಿಯಿರದ ನೆಲೆಗೆ ಕರೆದೊಯ್ಯಬೇಕೆಂದು ವಿದ್ಯಾರಾವ್ ಹೇಳುವಾಗ ಕೆಲವು ಪ್ರಶ್ನೆಗಳು ನಮ್ಮಲ್ಲಿ ಹುಟ್ಟಿಕೊಳ್ಳುತ್ತವೆ. ಇವರು ಗಟ್ಟಿ ಹೆಂಗಸರೇ? ಇವರು ತಮ್ಮ ವ್ಯಕ್ತಿತ್ವಗಳನ್ನು ಒಂದು 'ಮಾದರಿ'ಯಾಗಿ ಮಾಡಬೇಕೆಂದು ಬಯಸುತ್ತಾರೆಯೇ? ಅವರು ಕಲಾ ಪ್ರಪಂಚದಲ್ಲಿ ಕೇವಲ ಬದುಕುಳಿದಿದ್ದಾರೆಯೇ? ಅಥವಾ ಅವರು ಮಹತ್ವವಾದುದನ್ನು ಸಾಧಿಸಿದ್ದಾರೆಯೇ? ಅವರು ಏನಾಗಿರುವರೋ, ಇಲ್ಲವೋ, ಆದರೆ ಅವರ ಸಾಮಾನ್ಯತೆ ಯೆಂದರೆ ಸಂಗೀತ.

ಅವರು ಎಲ್ಲಾ ರೀತಿಯಲ್ಲಿ ಮೇಲ್ಗಣಿಸಿದ ಮಹಿಳೆಯರೂ ಹೌದು, ಹಾಗೂ ಅದಕ್ಕಿಂತಲೂ ಹೆಚ್ಚು. ಇವರೆಲ್ಲಾ ತುಂಬಾ ಪ್ರತಿಭಾವಂತರು ಹಾಗೂ ಕಷ್ಟಪಟ್ಟು ದುಡಿಯುವ ಮಹಿಳೆಯರು. ಎಲ್ಲರ ಬದುಕುಗಳೂ ನೋವು ಹಾಗೂ ಹೋರಾಟದ ಕತೆಗಳನ್ನು ಹೇಳುತ್ತವೆ. ಅವರು ಅಂದುಕೊಂಡ ಹಾಗೆಯೇ ಅವರೆಲ್ಲಾ ಬದುಕಿದರೇ? ಕಲೆಯ ಉನ್ನತ ಶಿಖರಕ್ಕೇರುವಲ್ಲಿ ಅವರು ಹೇಳಿರುವ ಕತೆಗಳಲ್ಲಿ ಹೆಚ್ಚು-ಕಡಿಮೆ ಒಂದೇ ರೀತಿಯ ಸಾಮ್ಯತೆಗಳಿವೆಯೇ? ಇವೆಲ್ಲಾ ಇವೆ...ಹಾಗೂ ಇನ್ನೂ ಹೆಚ್ಚು. ಖಾಸಗಿ ಹಾಗೂ ಸಾರ್ವಜನಿಕ ಬದುಕನ್ನು ಒಗ್ಗೂಡಿಸುವಲ್ಲಿ ಬರುವ ಅವರ ಸಂಭಾಷಣೆಗಳು-ಭಾವನಾತ್ಮಕತೆ ಅವರ ಕಲೆ ಒಂದು ಭಾಗ ಎಂಬುದನ್ನು ತೋರಿಸುತ್ತವೆ. ಹಾಡುಗಾರರ ನಿಜವೆಂದರೆ ಹಾಡುಗಳು. ಲಕ್ಷ್ಮಿಯವರ ಮಾತುಗಳಲ್ಲಿ ಈ ಪುಸ್ತಕ ಮಹಿಳೆಯರ ಬದುಕಿನೊಳಗೆ ಇಳಿದು ನೋಡುವ ಒಂದು ಪ್ರಯತ್ನವೇ ಹೊರತು, ಅವರು ಕೇವಲ ಕತೆಗಾರರು ಅಥವಾ ಜನರು ಎಂದು ಗುರುತಿಸುವುದಲ್ಲ. ಕಲೆಯ ಸಂದರ್ಭದಿಂದ ತೆಗೆದು ಇಂತಹ ಫೆಮಿನೈನ್ (ghetlo) ಇರುವವರು ಎಂದು ಹೇಳುವುದೂ ಅಲ್ಲ. ಆ ಮೂಲಕ ಅವರ ಬದುಕಿನ ಅಥವಾ ಕಲೆಯ ಸಾಮ್ಯತೆಯನ್ನು ಹುಡುಕುವುದೂ ಅಲ್ಲ. ಪಿತೃಪ್ರಾಧಾನ್ಯತೆ ಇವರನ್ನು ನಿರ್ದಿಷ್ಟವಾಗಿ ರೂಪಿಸಿದ ಸಂದರ್ಭದಲ್ಲಿ ಈ ಮಹಿಳೆಯರು ಹಂಚಿ ಕೊಳ್ಳುತ್ತಿರುವ ಚಾರಿತ್ರಿಕ ಸಂದರ್ಭ, ಅವರ ಬದುಕು, ನಿರ್ವಹಣೆಯಲ್ಲಿ ಅವರನ್ನು ಮಹಿಳೆ ಹಾಗೂ ಕಲಾವಿದರನ್ನು ಅರಿತುಕೊಳ್ಳುವುದಾಗಿದೆ.

ಸಂಗೀತಗಾರ್ತಿಯರ ಬಗ್ಗೆ ಆ ಸಂದರ್ಭದಲ್ಲಿ ಇದ್ದ ನೈತಿಕತೆ, ಗೌರವ, ಆಗ ಇದ್ದ ಕ್ಲಾಸಿಕಲ್, ಜನಪ್ರಿಯ, ಸಂಪ್ರದಾಯಿಕ ಮತ್ತು ಪ್ರಚಲಿತ ಫಾರಂಗಳು ಈ ಮಹಿಳೆಯರ ಆಲೋಚನಾ ದಾಟಿಗಳಲ್ಲಿ ವ್ಯಕ್ತಗೊಳ್ಳುತ್ತವೆ. ಹಾಗೂ ಇವರೊಡನೆ ಇರುವ ಇವರ ತಂದೆ/ತಾಯಿ, ಗೆಳೆಯರು/ಗಂಡಂದಿರು, ಹಿತೈಷಿಗಳು. ಈ ಮಹಿಳೆಯರು ತಮ್ಮ ಕತೆಗಳನ್ನು ಹೇಳುವಾಗ ಸಂಭಾಷಣೆಯ ಭಾಗವಾಗುತ್ತಾರೆ.- ಅಲ್ಲಿ-ಇಲ್ಲಿ ಹಾಗೂ ಒಮ್ಮೊಮ್ಮೆ ಅತಿಯಾಗಿ ಬರುವ ಒಳಗಿನ ಹಾಗೂ ಹೊರಗಿನ ಮೌನದ ಸಂದರ್ಭ-ಮಹಿಳೆಯರ ಮೌಖಿಕ ಇತಿಹಾಸದ ಭಾಗವಾಗಿ ರುವುದು ಸಹ ಈಚೆ ಬರುತ್ತದೆ. ನಿಜವೆಂದರೆ ಸಂಗೀತಗಾರ್ತಿ ಯರಿಗೆ ಕೆಲವೇ ರಾಗಗಳನ್ನು ಹೇಳಿಕೊಡುತ್ತಿದ್ದರು. ಅಂತಹ ರಾಗವೆಂದರೆ ಶ್ರೀರಂಗಮ್ ರಾಗ. ಇತರೆ ರಾಗಗಳನ್ನು ಮಹಿಳೆಯರು ಕಲಿಯುವಂತಹವುಗಳಲ್ಲ ಎನ್ನಲಾಗುತ್ತಿತ್ತು. ಪುರುಷ ಸಂಗೀತಗಾರರು ಅವರ ವಿದ್ವತ್ತಿನ ಒಂದು ಹಂತದಲ್ಲಿ ಉಸ್ತಾದ್ಸ್ ಹಾಗೂ ಪಂಡಿತರಾಗುತ್ತಿದ್ದರು. ಮಹಿಳಾ ಸಂಗೀತಗಾರ್ತಿಯರು 'ಬಾಯಿ' ಎಂದು ಕರೆಯಲ್ಪಡುತ್ತಿದ್ದರು ಮಾತ್ರ. ಅವರಿಗೆ ಎಷ್ಟೇ ಕಲಾ ಸಾಮರ್ಥ್ಯವಿದ್ದರೂ ಕೂಡಾ ಅವರು ಸಂಗೀತ ಕ್ಷೇತ್ರದಲ್ಲಿ ಅಂಚಿನ ಸ್ಥಾನದಲ್ಲಿಯೆ ಉಳಿದು ಬಿಡುತ್ತಿದ್ದರು.

ಹಾಗಾಗಿಯೇ ಲಕ್ಷ್ಮಿಯವರು ಸಂಭಾಷಣೆ ಹಾಗೂ ಅಭಿವ್ಯಕ್ತಿಕ್ರಮವನ್ನು ಸೂಕ್ಷ್ಮವಾಗಿ ಆಯ್ಕೆ ಮಾಡಿ ಕೊಂಡಿದ್ದಾರೆ. ಬೇರೆ ಬೇರೆ ಬದುಕು, ಭಿನ್ನ ಕತೆಗಳನ್ನು ಸಾವಿರಾರು ಭಿನ್ನ ಉತ್ತರಗಳು, ಸಾವಿರಾರು ಭಿನ್ನ ಧ್ವನಿಗಳನ್ನು ಓದುಗರಿಗಾಗಿ ಪ್ರತಿಧ್ವನಿಸಲು ಲಕ್ಷ್ಮಿಯವರು ಪ್ರಯತ್ನಿಸಿದ್ದಾರೆ. ಹಾಗೂ ಲಕ್ಷ್ಮಿಯವರು ಈ ಪುಸ್ತಕದ ಹದಿನಾರು ಮಹಿಳೆಯರ ಸಂಭಾಷಣೆಯಲ್ಲಿ ತಮ್ಮ ಬದುಕನ್ನೂ ಬಿಚ್ಚಿಡುತ್ತಾರೆ. ಸ್ವತಂತ್ರ್ಯವೆಂದರೆ ಅದು ಇರುವುದು, ಆಗುವುದಲ್ಲ ಎಂಬುದನ್ನು ಧ್ವನಿಸುತ್ತಾರೆ.

ಹೀಗೇ ಮುಂದುವರೆದಾಗ, ಲಕ್ಷ್ಮಿಯವರ ಬಗ್ಗೆಯೂ ಸಹ ನಾವು ಹಲವಾರು ನೋಟಗಳನ್ನು ನಾವು ಕಾಣಬಹುದು. ಆಕೆ ಕಾಣಲಾರದ ಸಂದರ್ಶಕಿಯಾಗಿ ಉಳಿಯುವುದಿಲ್ಲ. ಲಕ್ಷ್ಮಿಯವರು ನವಿರಾಗಿ, ಆದರೆ ನಿಖರವಾಗಿ ತಮ್ಮ ನಾಯಕಿಯರ ಬದುಕನ್ನು ಓಣಿ ಓಣಿಯ ಮೂಲಕವಾಗಿ ಹೆದ್ದಾರಿಗೆ ಒಯ್ಯುತ್ತಾರೆ. ಅವರ ಜೊತೆ, ಜೊತೆಯಾಗಿ ಕೊನೆಯವರೆಗೂ ನಡೆಯುತ್ತಾರೆ, ಮೈಲಿಗಲ್ಲುಗಳನ್ನು ದಾಟುತ್ತಾರೆ. ಲಕ್ಷ್ಮಿ ಲೇಖಕಿಯಾಗಿ, ಸಂಗೀತದ ಪ್ರಾಣ ಸಖಿಯಾಗಿ, ಸಣ್ಣ ಕತೆಗಾರ್ತಿಯಾಗಿ, ಪ್ರಜ್ಞಾವಂತ ಹೆಣ್ಣಾಗಿ, ಸಿನೆಮಾ ನಿರ್ದೇಶಕಿಯಾಗಿ ಒಟ್ಟಾಗಿ ಈ ಪುಸ್ತಕದಲ್ಲಿ ಇದ್ದಾರೆ. ಈ ಪುಸ್ತಕವು ಕತೆಗಾರ್ತಿಯ ಕಲೆ ಕೂಡಾ ಆಗಿದೆ. ಅವರುಈ ಪುಸ್ತಕದ ಒಂದು ಪುಟ ಅಥವಾ ಘಟನೆಯಿಂದ ಸಹಾ ಕಾಣೆಯಾಗಿಲ್ಲ. ಈ ಪುಸ್ತಕದ ಬಿಡುಗಡೆಯ ಸಂದರ್ಭದಲ್ಲಿ

'ಈ ಪುಸ್ತಕದಲ್ಲಿ ಇರುವ ಮಹಿಳೆಯರೆಲ್ಲ ಯಾಕೆ ಕ್ಲಾಸಿಕಲ್ ಸಂಗೀತಗಾರ್ತಿರು? ಹಾಗೂ ಜಯಪ್ರದ ಮಹಿಳೆಯರು? ಎಂಬ ಪ್ರಶ್ನೆಗೆ ಉತ್ತರಿಸುತ್ತಾ ಲಕ್ಷ್ಮಿಯವರು ತಮ್ಮ ಬಾಲ್ಯದಲ್ಲಿ ಕ್ಲಾಸಿಕಲ್ ಸಂಗೀತ ಹಾಗೂ ನೃತ್ಯಕ್ಕೆ ತಾವು ತೆರೆದುಕೊಂಡು ರೀತಿಯ ಹಿನ್ನಲೆಯಲ್ಲಿ ಈ ಪುಸ್ತಕ ರೂಪುಗೊಂಡಿದೆ ಎಂದು ನುಡಿದರು.

ಈ ಪುಸ್ತಕವನ್ನು ರೂಪಿಸುವಲ್ಲಿನ ನೋವು, ಕಠಿಣ ಪ್ರಯತ್ನ, ಶ್ರಮದಿಂದ ಬದುಕಬೇಕಾದ ಅವಶ್ಯಕತೆ, ಪ್ರತಿಯೊಬ್ಬರನ್ನು ಭೇಟಿ ಮಾಡುವ, ಹಾಗೂ ಅದನ್ನು ಅರ್ಥಪೂರ್ಣವಾಗಿಸುವ, ಪ್ರತಿಯೊಬ್ಬ ಮಹಿಳೆಯ ಬದುಕು, ಸಂಗೀತ, ಆಕೆಯ ಸ್ಫೂರ್ತಿಯನ್ನು ಒಂದು ಸಾಮಾನ್ಯ ನೇಯ್ಗೆಯಲ್ಲಿ ನೇಯುವ, ಪ್ರತಿಬಿಂಬಿಸುವ ಕೆಲಸವನ್ನು ಲಕ್ಷ್ಮಿಯವರು ಅತ್ಯಂತ ಸಮರ್ಥರಾಗಿ ನಿರ್ವಹಿಸಿದ್ದಾರೆ. ಕೆಲವು ಸಲ ನೆರಳಾಗಿ, ಕೆಲವು ಸಲ ಹಸಿರು ನೀರಿನಲ್ಲಿ ಬಿಂಬಿಸುವ ಬಿಂಬವಾಗಿ, ಕೆಲವು ಸಲ ಕಲ್ಲುಗಳ ಮಧ್ಯದ ತಿಳಿನೀರಿನ ಸ್ವಚ್ಛ ಬಿಂಬವಾಗಿ ಲಕ್ಷ್ಮಿಯವರು ಪ್ರತಿಬಿಂಬಿಸಿದ್ದಾರೆ.

*ಲಕ್ಷ್ಮೀಯವರು ತಮ್ಮ ಮುನ್ನುಡಿಯಲ್ಲಿ ನುಡಿಯುತ್ತಾರೆ:*

ಈ ಮಹಿಳೆಯರ ನನ್ನದೂ ಸೇರಿದಂತೆ ಬದುಕನ್ನು ಶ್ರೀಮಂತವಾಗಿ ಎಂಬ್ರಾಯಿಡರಿ ಮಾಡಿದ ಕಾರ್ಪೆಟ್‌ಗಳಂತೆ ಬಿಚ್ಚಿಟ್ಟು ಆ ಹೆಣಿಕೆಯ ಒಳಗಿನ ಅತ್ಯಂತ ಸೂಕ್ಷ್ಮವಾದ ವಿವರಗಳನ್ನು ಅಭ್ಯಸಿಸುವ ಬಯಕೆಯೇನೂ ನನಗಿತ್ತು. ಆದರೆ ನನಗೆ ಸ್ವಲ್ಪ ಸಮಯದಲ್ಲಿಯೇ ಸ್ಪಷ್ಟವಾದ ವಿಚಾರವೆಂದರೆ, ಯಾವಾಗಲೂ ಯಾವುದೋ ಮುಚ್ಚಿಡಲ್ಪಡುತ್ತದೆ...... ಯಾವುದೋ ತೆರೆದುಕೊಳ್ಳುತ್ತದೆ.......ನಾವು ಗಮನಿಸ ಬೇಕಾದುದೆಂದರೆ ಈ ಮುಚ್ಚಿಡುವ ಹಾಗೂ ಬಿಚ್ಚಿಡುವ, ಮಿತಿ, ಗಡಿರೇಖೆಗಳನ್ನು, ಭಾಷೆಯನ್ನು ಭಿನ್ನವಾಗಿಸುವ ಹಿಂದಿರುವ ರಾಜಕೀಯವನ್ನು ಎನ್ನುತ್ತಾರೆ. ಈ ಹಿನ್ನೆಲೆಯಲ್ಲಿ ಮೌನದ, ಮಾತಿನ ಸೂಕ್ಷ್ಮಗಳನ್ನು ಲಕ್ಷ್ಮಿಯವರು ಹಲವಾರು ಸಂಗೀತಗಾರ್ತಿಯರಲ್ಲಿ ಈ ಪುಸ್ತಕದಲ್ಲಿ ಗಮನಿಸಿದ್ದಾರೆ.

---

## ಪತಿ-ಪತ್ನಿ ಸಮಾನತೆ

ಗಂಡು ಹೆಣ್ಣಿನ ಸಮಾನತೆಯಂಥ ವಿಸ್ತಾರವಾದ ಜಗತ್ತಿನಿಂದ ಪತಿ-ಪತ್ನಿಯರ ಪುಟ್ಟ ಜಗತ್ತಿಗೆ ಬರೋಣ. ಅವರ ಸಮಾನತೆ ಬಗ್ಗೆ ಸಣ್ಣದಾಗಿ ನನ್ನ ಅಭಿಪ್ರಾಯ ಹೇಳುತ್ತೇನೆ.

ನಮ್ಮ ಸಮಾಜದಲ್ಲಿ ಗಂಡಂದಿರೆ ಸಂಪಾದನೆ ಮಾಡಿ ಸಂಸಾರವನ್ನು ಸಾಕುವುದು. ಹೆಂಡತಿಯರೂ ಸಂಪಾದಿಸಿ ತಮ್ಮ ಮನೆಯ Living standardನ್ನು ಹೆಚ್ಚಿಸಿಕೊಳ್ಳುವುದೂ ಸಾಕಷ್ಟು ಪ್ರಮಾಣದಲ್ಲಿದೆ. ಅದು ಬೇರೆ.

ಆದರೆ ಗಂಡಂದಿರು ಮಾತ್ರ ಸಂಪಾದನೆ ಮಾಡುತ್ತಿರುವ ಸಂಸಾರಗಳಲ್ಲಿ ಎಷ್ಟರಮಟ್ಟಿಗೆ ಆತನ ಸಂಪಾದನೆ ಸಂಸಾರಕ್ಕೋಸರ ಸದ್ವಿನಿಯೋಗವಾಗುತ್ತಿದೆ? ಎಷ್ಟೋ ಪ್ರಕರಣಗಳಲ್ಲಿ ಅವರ ತನ್ನ ಸ್ವಂತ ಆಮಿಷಗಳಾದ ಕುಡಿತ, ಇಸ್ಪೀಟು ಚಟಗಳಿಗಾಗಿ ವಿನಿಯೋಗಿಸಲಾಗುತ್ತದೆ. ಸಂಬಳದ ದಿನ ಅಷ್ಟೋ ಇಷ್ಟೋ ಹೆಂಡತಿಗೆ ಕೊಟ್ಟುಬಿಟ್ಟು ಉಳಿದದ್ದನ್ನು ಮಜಾ ಉಡಾಯಿಸುತ್ತಾರೆ. ಎಷ್ಟೋ ಹೆಂಡತಿಯರು ಸಂಬಳ ದಿನ ಆಫೀಸುಗಳಿಗೆ ಬಂದು ಅಲ್ಲೇ ಅಂದರೆ ಗಂಡ ಅದನ್ನು ಮುಗಿಸಲು ಪ್ರಾರಂಭಿಸುವ ಮೊದಲೇ ಮನೆ ಖರ್ಚಿಗೆ ಕೇಳುತ್ತಾರೆ. ಜಗಳವಾಡುತ್ತಾರೆ, ಮೇಲಾಧಿಕಾರಿಗಳಿಗೆ ದೂರು ಸಲ್ಲಿಸಿ ಅವರ ಮಧ್ಯಸ್ತಿಕೆ ಪಡೆಯುತ್ತಾರೆ. ಆದರೆ ತುಂಬಾ ಜನ ತಮ್ಮ ಮೇಲಾಧಿಕಾರಿಗಳಿಗೆ ಬಗ್ಗುವುದಿಲ್ಲ. ಮನೆಯ ಖರ್ಚುವೆಚ್ಚ ಸರಿಯಾಗಿ ತೂಗಿಸುವುದಕ್ಕಾಗದಿದ್ದರು ಮಕ್ಕಳು ಮೇಲಿನ ಹತೋಟಿ ತಪ್ಪಿ ಅವರು ತಪ್ಪುದಾರಿ ಹಿಡಿಯುವ ಸಂಭವವೇ ಹೆಚ್ಚು.

ಇದಕ್ಕೊಂದು ಉಪಾಯ ಹೊಳೆಯುತ್ತಿದೆ. ಆದರೆ ಇವರು ಸಂಬಳದಾದರಿಗೆ ಮಾತ್ರ ಅನ್ವಯಿಸಬಹುದು.

ಸರ್ಕಾರಿ/ಖಾಸಗಿ ಇಲಾಖೆಗಳು ಸಂಬಳ ಪಡೆಯುವ ಬಗ್ಗೆ ಗಂಡ-ಹೆಂಡತಿ ಇಬ್ಬರನ್ನು ಸಮಾನಬದ್ಧರನ್ನಾಗಿ ಮಾಡಬೇಕು. ಯಾವುದೇ ಸಾಲ ಇತ್ಯಾದಿಗಳನ್ನು ನೀಡುವಾಗ ಅದಕ್ಕೆ ಹೆಂಡತಿಯ ಒಪ್ಪಿಗೆ ಇರಬೇಕು. ಮತ್ತು ಸಂಬಳದ ಅರ್ಧವನ್ನು ಹೆಂಡತಿಗೇ ಪ್ರತ್ಯೇಕವಾಗಿ ಸಹಿ ತೆಗೆದುಕೊಂಡು ನೀಡಬೇಕು.

ಇದಕ್ಕೆ ತಕ್ಕಂಥ ಕಾನೂನುಗಳನ್ನು ಸರ್ಕಾರ ಮಾಡಬೇಕು. ಆಗ ಸ್ವಲ್ಪವಾದರೂ ಸಾಂಸಾರಿಕ ಜೀವನದಲ್ಲಿ ನೆಮ್ಮದಿ ಕಂಡೀತು. ಎಷ್ಟೋ ಜನ ಸಂಸಾರಸ್ಥ ಮಹಿಳೆಯರು ನಿಟ್ಟುಸಿರು ಬಿಟ್ಟಾರು!

○ ಕೃಷ್ಣಮೂರ್ತಿ

# "ಧೈರ್ಯವೇ ಬದುಕಿನ ದಾರಿ"

● ವತ್ಸಲಾ ವೈ.ಎಸ್.

ಇದು ಒಂದು ಪ್ರೇಮ ವಿವಾಹವಾಗಿದ್ದು, ಗಂಡನಾದವನು ಸೋಮಾರಿಯಾಗಿದ್ದು ಖಾಯಂ ಕೆಲಸವಿರಲಿಲ್ಲ. ಸಿಕ್ಕಿದ ಕಡೆಯಲ್ಲಿ ಹೋಗಿ ಕೆಲಸ ಮಾಡಿಕೊಂಡು ಕೆಲಸವಿಲ್ಲದಾಗ ಅಲ್ಲಿ ಇಲ್ಲಿ ಓಡಾಡುತ್ತಿದ್ದ. 'ಮಳೆ ಬಂದರೆ ಬೆಳೆ' ಎಂಬಂತೆ ಅವನು ಸಹ ಕೆಲಸ ಸಿಕ್ಕಿದರೆ ಕೆಲಸ ಇಲ್ಲವಾದರೆ ಇಲ್ಲದೆ ಸುಮ್ಮನೆ ಕುಳಿತೋ, ತಿರುಗಾಡಿಕೊಂಡೊ ಇರುತ್ತಿದ್ದ. ಮದುವೆಯಾದ ಒಂದು ವರ್ಷಕ್ಕೆ ಒಂದು ಹೆಣ್ಣು ಮಗು ಆಯಿತು. ಇದಾದ 3 ವರ್ಷಕ್ಕೆ ಗಂಡ ಇದ್ದಕ್ಕಿದ್ದ ಹಾಗೆ ಹೇಳದೆ ಕೇಳದೆ ಮನೆ ಬಿಟ್ಟು ಹೋದನು. ಎಲ್ಲಿಗೆ ಹೋದ ಎನ್ನುವುದು ಕೂಡ ತಿಳಿಯದ ಹೆಂಡತಿ ಆ ಮಗುವಿನೊಂದಿಗೆ ಅನಾಥಳಾದಳು. ಪದವಿಯನ್ನು ಮುಗಿಸಿದ್ದ ಆ ಹುಡುಗಿ ಅಲ್ಲಿ ಇಲ್ಲಿ ಓಡಾಡಿ ಒಂದು ಕೆಲಸ ಹುಡುಕಿಕೊಂಡಳು. ಅವಳು ತವರಿನವರಿಗೆ ಆಗಲಿ, ಗಂಡನ ಮನೆಯವರಿಗೆ ಆಗಲಿ ತೊಂದರೆಯನ್ನು ಕೊಡದೇ ತನ್ನ ಮಗಳನ್ನು ಚೆನ್ನಾಗಿ ಬೆಳೆಸಬೇಕೆಂದು ಅದಕ್ಕೆ ತಾನು ತನ್ನಕಾಲ ಮೇಲೆ ನಿಲ್ಲಬೇಕೆಂದು ನಿರ್ಧರಿಸಿದಳು.

ಹೀಗೆ ಆರು ತಿಂಗಳು ಕಳೆದ ಬಳಿಕ ಗಂಡನ ಚಿಕ್ಕಪ್ಪ ಅಥವಾ ದೊಡ್ಡಪ್ಪ ಸತ್ತ ಸುದ್ದಿ ತಿಳಿಯಿತು. ಆ ಸಾವಿಗೆ ಅವಳು ಆಕಸ್ಮತ್ತಾಗಿ ಹೋದಾಗ ಈ ವಿಷಯವನ್ನು ತಿಳಿದ ಗಂಡ ಕೂಡ ಅಲ್ಲಿಗೆ ಬಂದಿದ್ದ, ಆರು ತಿಂಗಳಿಂದ ನಾಪತ್ತೆಯಾಗಿದ್ದು ಇದ್ದಕ್ಕಿಂತೆ ಬಂದ ಅವನನ್ನು ನೋಡಿದ ಜನ ಅವನಿಗೆ ಛೀಮಾರಿಯನ್ನು ಹಾಕುವ ಬದಲಿಗೆ 'ಹೋಗಲಿ ಬಿಡು ಬಂದೆಯಲ್ಲ, ಹೇಗೋ ಅವಳು ಕೆಲಸ ಮಾಡುತ್ತಿದ್ದಾಳೆ. ಅವಳೆ ನಿನ್ನನ್ನು ಸಾಕುತ್ತಾಳೆ. ನೀನು ಮನೆಯಲ್ಲಿ ಮಗುವನ್ನು ನೋಡಿಕೊಂಡು ಅವಳ ಗಂಡನಾಗಿ ಅವಳ ಜೊತೆಯಲ್ಲಿದ್ದರೆ ಅಷ್ಟೆ ಸಾಕು ಅವಳಿಗೂ ಸಹಾಯವಾಗುತ್ತದೆ. ಏನೋ ಕೆಟ್ಟ ಘಳಿಗೆ ಆಗಿದ್ದಾಯಿತು. ಇನ್ನಾದರೂ ಸರಿಯಾಗಿರು ಎಂದು ಬುದ್ಧಿ ಹೇಳಿದರು. ಹೇಳದೆ ಕೇಳದೆ ಹೋದ ಗಂಡ ಹೆಂಡತಿ ಆತನನ್ನು ಕಂಡಕೂಡಲೆ ಹೆಡೆ ತುಳಿದ ನಾಗಿಣಿಯಂತೆ ಅವನಿಗೆ ಛೀಮಾರಿ ಹಾಕಿ, ನೀ ಇಲ್ಲದೆ ಈಗಾಗಲೇ ಆರು ತಿಂಗಳು ಕಳಿದಿದ್ದೇನೆ. ನನ್ನನ್ನು ಮತ್ತು ನನ್ನ ಮಗುವನ್ನು ಸಾಕಿಕೊಳ್ಳುವ ಸಾಮರ್ಥ್ಯ, ಶಕ್ತಿ ನನಗಿದೆ. ಇನ್ನು ನನಗೆ ನಿನ್ನ ಆಶ್ರಯವು ಬೇಕಿಲ್ಲ ಮತ್ತು ನೀನು ಬೇಕಾಗಿಲ್ಲ. ನಿನ್ನ ಬೇಜವಾಬ್ದಾರಿಯನ್ನು ಕಂಡು ನನಗೆ ಹೇಸರಿಕೆಯಾಗುವುದು ಎಂದು ಹಾರಾಡುವ ಬದಲಿಗೆ ಆಕೆ ತನ್ನ ಸುತ್ತ ಮುತ್ತಲಿನ ಜನರಂತೆ ತಾನು ಅವನು ಬಂದದ್ದು ಒಳ್ಳೆಯದಾಯ್ತು. ಆತ ನನ್ನ ಜೊತೆ ಇದ್ದರೆ ಬೇರೆ ಗಂಡಸರ ಕೆಟ್ಟ ದೃಷ್ಟಿಯಿಂದ ಪಾರಾಗಬಹುದು. ಅವರಿವರ ಬಾಯಿಗೆ ಬೀಳದೆ ಇರಬಹುದು ಎಂದು ಗಂಡ ತನ್ನ ಜೊತೆಯರಲಿ ಎಂದು ಬಯಸಿದಳು.

ಇದು ನಿಜಕ್ಕೂ ಶೋಚನೀಯ ವಿಷಯವಾಗಿದೆ. ಗಂಡನಿಗೆ ಹೆಂಡತಿ ಮಕ್ಕಳು ಬೇಕೆಂದೆನಿಸಿದಾಗ ಬೇಕು, ಬೇಡವೆಂದೆನಿಸಿದರೆ ಬೇಡ ಎಂದು ಯಾರಿಗೆ ಹೇಳದೆ ಕೇಳದ ಹೋದವನಿಗೆ ಮಣೆ ಹಾಕಿ ಕೂಡಿಸುವ ಅಗತ್ಯವೇನಿತ್ತು? ಇದೇ ಅವನ ಚಾಳಿಯಾದರೆ ಯಾರು ಹೊಣೆ? ಇದರ ಪರಿಣಾಮ ಹೆಂಡತಿ ಮತ್ತು ಅವನ ಮಗಳ ಮೇಲೆ ಬೀರದೆ ಇರುವುದೆ?

ಅಷ್ಟು ಜನರಲ್ಲಿ ಒಬ್ಬ ಹೆಂಗಸು ಅವನನ್ನು ಛೀಮಾರಿ ಹಾಕಿದಳು. ಇಷ್ಟು ದಿನ ನೀನೆ ಇದ್ದೆಯಾ, ಅವಳ ಬದುಕು ಅವಳಿಗೆ, ಎಂದು ಛೀರಿ ಹೇಳಿದರೂ ಉಳಿದವರ ಬಾಯಿಗಳ ಮುಂದೆ ಮತ್ತು ಆತನ ಹೆಂಡತಿಯ ತೀರ್ಮಾನದ ಮುಂದೆ ಆ ಹೆಂಗಸಿನ ಮಾತುಗಳು ಎಲ್ಲೋ ಗಾಳಿಯಲ್ಲಿ ತೂರಿಬಂದಂತೆ ಆಯಿತು ಅಷ್ಟೇ.

## II

18 ವಯಸ್ಸಿನ ಹುಡುಗಿ. ಒಬ್ಬ ಬೇರೆ ಜಾತಿಯ ಹುಡುಗನ ಜೊತೆ ಪ್ರೇಮವಿವಾಹವನ್ನು ಅದೂ ದೊಡ್ಡವರ ಒಪ್ಪಿಗೆ ಮೇರೆಗೆ ಮದುವೆಯಾದಳು. 1½ ವರ್ಷದ ನಂತರ ಅವನು ತನ್ನ ಮನೆಯವರು ಗೊತ್ತು ಮಾಡಿದಂತೆ ತನ್ನ ಜಾತಿಯವಳ ಜೊತೆ ಮತ್ತೆ ಮದುವೆಯಾದ. ಇಲ್ಲಿ ಮೊದಲ ಹೆಂಡತಿ ಹೆರಿಗೆ ನೋವಿನಿಂದ ನರಳುತ್ತಿದ್ದರೆ, ಅಲ್ಲಿ ಗಂಡನಾದವನು ಇನ್ನೊಬ್ಬ ಹೆಂಡತಿಯೊಡನೆ ಮೊದಲ ರಾತ್ರಿ ಕಳೆಯುತ್ತಿದ್ದ. ಏನು ವಿಪರ್ಯಾಸ. ತನ್ನಿಂದ ತಾಯ್ತನವನ್ನು ಕಂಡು ತನ್ನ ಮಗುವಿಗೆ ಜನ್ಮ ಕೊಡುವಾಗ, ಆಕೆಯ ಹತ್ತಿರವಿದ್ದು ಅವಳ ಬೇಕು ಬೇಡಗಳನ್ನು ಗಮನಿಸುವ ಜವಾಬ್ದಾರಿ ಗಂಡನಾಗಬೇಕಿದ್ದವನು, ತನಗೆ ಮತ್ತು ಆ ಮಗುವನ್ನು ಹೆರುತ್ತಿರುವವಳಿಗೆ ಯಾವುದೆ ಸಂಬಂಧವೆ ಇಲ್ಲವೇನೋ ಎನ್ನುವಂತೆ ತನ್ನ ಇನ್ನೊಬ್ಬ ಹೆಂಡತಿಯೊಡನೆ ಕಾಲ ಕಳೆಯುತ್ತಿರುವ ಈ ಗಂಡನಿಗೂ, ಪ್ರಾಣಿಗೂ ಏನು ವ್ಯತ್ಯಾಸ? ನಂತರ ಒಂದು ಪ್ರೊವಿಶನ್ ಅಂಗಡಿಯೊಂದನ್ನು ಶುರುಮಾಡಿ, ತನ್ನ ಮೊದಲ ಹೆಂಡತಿಗೆ ಹೇಳಿದ "ನೀನು ಅಂಗಡಿ ನೋಡಿಕೋ, ನಿನ್ನ ಮಗುವನ್ನು ನಾವು ನೋಡಿಕೊಳ್ಳುತ್ತೇವೆ".

ಪಾಪ ಅವನ ಮೊದಲ ಹೆಂಡತಿ ದಿನವೆಲ್ಲಾ ಅಂಗಡಿ ನೋಡಿಕೊಳ್ಳಬೇಕು. ಇವನು ಮಾತ್ರ ತನ್ನ ಇನ್ನೊಬ್ಬ ಹೆಂಡತಿಯೊಡನೆ ದಿನವೆಲ್ಲಾ ಹಾಯಾಗಿ ಕಳೆಯಬೇಕು. ಇಲ್ಲಿ ಗಂಡನಿಗೆ ಒಳ್ಳೆ ಸಂಪಾದನೆಯೂ ಆಯ್ತು. ಆ ಕಡೆ ಸುಖಮಯವಾದ ಜೀವನವು ಸಿಕ್ಕಿತು. ಇಲ್ಲಿ ಮೊದಲನೆ ಹೆಂಡತಿಯಾದವಳಿಗೆ ಕತ್ತೆ ತರಹ ದುಡಿಯುವ ಜೊತೆಗೆ 4/5 ಬಾರಿ ಅಬಾರ್ಷನ್ ಕೂಡ ಮಾಡಿಸಿಕೊಂಡಾಯ್ತು. ಈ ನರಕ ಜೀವನ ತಾಳಲಾರದೆ 3/4 ಬಾರಿ ಆತ್ಮಹತ್ಯೆ ಪ್ರಯತ್ನ ಕೂಡ ಮಾಡಿಯಾಯ್ತು. ಆದರೆ ಅವಳು ಸಾಯಲಿಲ್ಲ. ಕಡೆಗೆ ಇವಳನ್ನು ಆಸ್ಪತ್ರೆಗೆ ಸೇರಿಸಿ ಹೆತ್ತ ತಪ್ಪಿಗೆ ಅವಳ ತಂದೆ-ತಾಯಿ ಇವಳ ಆಸ್ಪತ್ರೆ ಬಿಲ್ಲನ್ನು ಕೊಡಬೇಕಾಯ್ತು. ನೀನು ನಡೆಸಿಕೊಳ್ಳುತ್ತಿರುವ ರೀತಿ ಸರಿಯಲ್ಲ ಎಂದು ಮೊದಲನೆಯ ಹೆಂಡತಿಯ ತಂದೆ ತಾಯಿಗಳ ಅವನನ್ನು ಕೇಳಿದರೆ, ನಿಮಗ್ಯಾಕೆ ಅವಳ "ಜವಾಬ್ದಾರಿ" ಎಂದು ಕಡ್ಡಿಯನ್ನು ತುಂಡು ಮಾಡುವವನಂತೆ ನುಡಿಯುತ್ತಿದ್ದ. ಆದರೆ ಅದು ಎಲ್ಲೂ ಬರವಣಿಗೆಯಲ್ಲಿ ಇರಲಿಲ್ಲ. ಈ ನರಕದಿಂದ ಆ ಹೆಣ್ಣಿಗೆ ಎಂದಿಗೆ ಮುಕ್ತಿ? ಅವಳನ್ನು ಇಂತಹ ವಿಷಮ ಪರಿಸ್ಥಿತಿಯಿಂದ ಹೊರ ತರುವುದು ಯಾರು? ಇಂತಹ ಜೀವನವನ್ನು ಎಷ್ಟೋ ಹೆಣ್ಣು ಮಕ್ಕಳು ನಡೆಸುತ್ತಿರುವರು. ಇವರಲ್ಲಿ ಬೆಳಕಿಗೆ ಬಂದಿರುವವರು ಎಷ್ಟು? ಇದನ್ನು ಬೆಳಕಿಗೆ ಬರಲು ಬಿಡದೆ ತಾನೇ ಹಣ ಖರ್ಚು ಮಾಡಿ ಪೊಲೀಸ್ ಕೇಸ್ ಆಗದಂತೆ ಮುನ್ನೆಚ್ಚರಿಕೆ ವಹಿಸುತ್ತಿದ್ದ ಒಬ್ಬ ಗಂಡನ ಹೇಡಿ ತನವನ್ನು ತೋರಿಸುತ್ತದೆಂದು ಆ ಗಂಡಸು ತಿಳಿದರೆ ಸಾಕು.

## III

ಗಂಡ ಕುಡುಕ, ಯಾವಾಗಲೂ ಕುಡಿಯಲು ಹೆಂಡ ಬೇಕು. ಆದರೆ ಕೆಲಸವಿಲ್ಲ. ದುಡ್ಡು ಎಲ್ಲಿಂದ ಬರಬೇಕು? ಕುಡಿಯದೇ ಇರಲು ಸಾಧ್ಯವಿಲ್ಲ. ದುಡ್ಡು ಇಲ್ಲದಾಗ ಹೆಂಡತಿಯನ್ನು ದುಡ್ಡು ತರಲು ಹೊಡೆದು ಹಿಂಸಿಸುವುದು. ಆ ಹಿಂಸೆಗಳ ಪರಿಯನ್ನು ಕೇಳುತ್ತಿದ್ದರೆ ಹೆಣ್ಣಿನ ಜೀವನವೆ ಬೇಡವೆನ್ನುವಷ್ಟು ಯಾತನೆ ಯಾಗುತ್ತದೆ. ಹೀಗೆ ಹಿಂಸೆ ತಾಳಲಾರದೆ ತಂದೆ-ತಾಯಿಗಳು ಹೆಂಡತಿಯನ್ನು ಕರೆದೊಯ್ದರು. ಆದರೆ ಅವಳ ಗಂಡನನ್ನು ಬಿಟ್ಟಿರದೆ ವಾಪಸ್ಸು ಬಂದಳು. ವಾಪಸ್ಸು ಬಂದ ಹೆಂಡತಿ ದುಡ್ಡು ತರಲಿಲ್ಲವೆಂದು ಮೈ, ಕೈ ಎಲ್ಲ ಕಟ್ಟಿ ಹಾಕಿರುವನು. ಇವನೇನು ಮನುಷ್ಯನೋ, ಇಲ್ಲ. ಮೃಗವೋ, ನರಭಕ್ಷಕನೋ? ಇವನನ್ನು ಬಿಟ್ಟಿರದೆ ಬಂದ ಹೆಂಡತಿಗೆ ತಲೆ ನೆಟ್ಟಗೆ ಇರುವುದೇ? ಅಥವಾ ಮತಿಗೆಟ್ಟವಳೇ?

ಹೆಂಡತಿ ಮೂರು ತಿಂಗಳ ಗರ್ಭಿಣಿ. ಜೀವನ ನಡೆಸಲು ಹಣವಿಲ್ಲ, ಕೆಲಸವಿಲ್ಲ, ಎಂದು ಆತ್ಮಹತ್ಯೆ ಮಾಡಿಕೊಂಡ ಭೂಪ. ಹೆಂಡತಿ ಕಡೆಯವರು ಪರಿಹಾರ ಕೊಡಲು ಗಂಡನ ಕಡೆಯವರಿಗೆ ಮೊರೆ ಹೊಕ್ಕರು. ಆದರೆ ಗಂಡನ ಕಡೆಯವರು ಸಾಧ್ಯವಿಲ್ಲ ವೆಂದು ಹೇಳಿದರು. ಇನ್ನೂ, ಆ ಹುಡುಗಿ, ಅವಳ ಹೊಟ್ಟೆಯಲ್ಲಿ ಬೆಳೆಯುತ್ತಿರುವ ಮಗುವಿನ ಜವಾಬ್ದಾರಿ ಯಾರು ಹೊರುವರು? ಎಂದು ಯೋಚಿಸಿದ ಒಬ್ಬ ಮಹಿಳಾ ಡಾಕ್ಟರು ಆಕೆಗೆ ಹೇಳಿದ ಮೊದಲ ಮಾತು ನೀನು ಆ ಗರ್ಭವನ್ನು ತೆಗೆಸಿಬಿಡು, ಸಾಕಲು ಯೋಗ್ಯತೆ ಇಲ್ಲದ ಗಂಡಸಿನ ಪಿಂಡವನ್ನು ನಿನ್ನಲ್ಲಿ ಬೆಳೆಸಿ ಏನು ಮಾಡ್ತೀಯಾ ಅಂತ ಹೇಳಲು, ಅವರು ಏನು ಮಾತಾಡದೆ ಹೋದರಂತೆ. ಒಂದು ಕಡೆ ಭ್ರೂಣ ಹತ್ಯೆ ಪಾಪವಾದರೇ, ತಾನೇ ಬದುಕಲು ಸಾಧ್ಯವಿಲ್ಲದವಳಿಗೆ ಮಗುಬೇಕೆ? ಎನ್ನುವುದು ಒಂದು ಪ್ರಶ್ನೆ. ಆ ನಂತರ ಎರಡು ತಿಂಗಳ ನಂತರ ಕಂಡ ಆ ಮಹಿಳಾ ಡಾಕ್ಟರು ಮೊದಲು ಕೇಳಿದ ಪ್ರಶ್ನೆ ಗಂಡ ಸತ್ತನೆ ಎನ್ನುವುದಕ್ಕಿಂತ ನೀನು ಬಸಿರನ್ನು ತೆಗೆಸಿದೆಯಾ ಎಂದು ಕೇಳಿದ್ದಕ್ಕೆ ಆಕೆ ಸಂತೋಷದಿಂದ ಹೌದು ಎಂದು ಹೇಳಿ, ತಾನು ಓದುತ್ತಿರುವ ಎಲ್ಲವನ್ನು ತಿಳಿಸಿದಳಂತೆ. ಇಂಥ ಡಾಕ್ಟರುಗಳು ಸಿಕ್ಕಿದರೆ ಇಂತಹ ಮಹಿಳೆಯರ ಜೀವನ ನಿಜಕ್ಕೂ ಶ್ಲಾಘನೀಯವಾಗುತ್ತದೆ.

ಹೀಗೆ ನಮ್ಮಲ್ಲಿ ಹೆಣ್ಣುಮಕ್ಕಳು ನಾನಾ ರೀತಿಯ ಮಾನಸಿಕ, ದೈಹಿಕ ಹಿಂಸೆಗಳನ್ನು ಪಡುತ್ತಿದ್ದಾರೆ. ಇಂತಹವರಿಗೆ ಸ್ತ್ರೀವಿಮೋಚನ ಸಂಘಗಳು ಇರುವುದೇ ತಿಳಿದಿಲ್ಲ. ಇಂತರ ಪ್ರಸಂಗಗಳಲ್ಲಿ ಹೆಣ್ಣುಮಕ್ಕಳು ತಾವೇ ಹೋಗಿ ಸ್ತ್ರೀ ಸಂಘ-ಸಂಸ್ಥೆಗಳಲ್ಲಿ ತಮ್ಮ ಕಷ್ಟಗಳನ್ನು ತೋಡಿಕೊಳ್ಳುವುದರಿಂದ ಇವರ ಸಮಸ್ಯೆಗಳಿಗೆ ಪರಿಹಾರ ಸಿಗಬಹುದು. ತಿಳಿದವರು ಇಂತಹ ಹೆಣ್ಣು ಮಕ್ಕಳಿಗೆ ದಾರಿ ದೀಪವಾಗಬೇಕು. ದುರದೃಷ್ಟವಶಾತ್ ಇಂತಹ ಹೆಣ್ಣುಮಕ್ಕಳ ಕಥೆಗಳನ್ನು ಕೇಳಿ ಆಡಿಕೊಂಡು ನಗುವವರು ಮತ್ತು ನಮಗ್ಯಾಕೆ ಈ ಉಸಾಬರಿ ಎನ್ನುವವರೇ ಜಾಸ್ತಿ.

ಕಿತ್ತೂರು ರಾಣಿ ಚೆನ್ನಮ್ಮ, ಝಾನ್ಸಿರಾಣಿ ಲಕ್ಷ್ಮೀಬಾಯಿ, ಓನಕೆ ಓಬವ್ವ ನಂತಹ ವೀರ ರಮಣೀಯರ ನಾಡು ನಮ್ಮದು. ಇಂತಹ ನೆಲದಲ್ಲಿ ಜನಿಸಿರುವ ಹೆಣ್ಣುಮಕ್ಕಳು ಅವರಂತೇ ಧೀರರಾಗಿ, ನ್ಯಾಯಕ್ಕಾಗಿ ಹೋರಾಡಬೇಕು. ಎಷ್ಟು ಮಂದಿ ತಮ್ಮ ಕಷ್ಟಗಳನ್ನು ಇತರರ ಮುಂದೆ ಹೇಳುವರು? ಗಂಡ ತನ್ನ ಎದುರಿಗೆ ಏನೇ ಅನ್ಯಾಯ ಮಾಡಿದರು, ಅವನು ಶ್ರೀರಾಮ ಚಂದ್ರನೆಂದೆ ಹೇಳುವವರು, ಇನ್ನು ಕೆಲವರು ಬೇರೆಯವರ ಮುಂದೆ ನಮ್ಮ ಕಷ್ಟ ಹೇಳಿದರೆ ಏನು ಪ್ರಯೋಜನವೆಂದು ಉದಾಸೀನ ಮಾಡುತ್ತಾರೆ. ಈ ರೀತಿ ಇತರರ ಮನೆ ಮಾತಿಗೆ ನಮ್ಮ ಕುಟುಂಬದ ವಿಷಯ ಆಹಾರವಾಗುವುದೆಂದು ಹೆದರಿ ಸುಮ್ಮನಿರುವವರೇ ಜಾಸ್ತಿ. ಜೀವನ ನಡೆಸುವುದೇ ದುರ್ಬಲ ಎನ್ನುವ ಕಾಲದಲ್ಲಿ ಕೋರ್ಟು, ಕೇಸು ಎಂದು ಹಣ ಸುರಿಯುವುದಕ್ಕೆ ಎಲ್ಲಿ ಸಾಧ್ಯ. ಈ ಎಲ್ಲಾ ಕಾರಣಗಳಿಂದಾಗಿ ಲೆಕ್ಕವಿಲ್ಲದಷ್ಟು ಮಂದಿ ತಮ್ಮನ್ನು ತಾವು ಸುಧಾರಿಸಿಕೊಂಡು ಬಾಳುವತ್ತಿರುವವರೇ ಜಾಸ್ತಿ.

ಇಂತಹ ಹೆಣ್ಣುಮಕ್ಕಳು ಧೈರ್ಯವಹಿಸಿ ಮುಂದೆ ಬಂದು ತನಗಾಗಿರುವ ಅನ್ಯಾಯವನ್ನು ಎದುರಿಸಿ, ನಾಲ್ಕು ಜನರಿಗೆ ತಿಳಿಯುವಂತೆ ಮಾಡಬೇಕು. ಸಮಾಜದ ದೃಷ್ಟಿ ಬದಲಾಗುತ್ತಾ ಬಂದಿದೆ. ಸ್ತ್ರೀ ಸಂಘ-ಸಂಸ್ಥೆಗಳು ಬೇಕಾದಷ್ಟು ತಲೆಯೆತ್ತಿವೆ. ಇಂತಹವುಗಳಿಗೆ ಭೇಟಿನೀಡಿ ತನಗೆ ನ್ಯಾಯ ದೊರಕಿಸಿ ಕೊಡುವ ಸಹೋದರಿಯರಲ್ಲಿ ತನ್ನ ಕಷ್ಟ ಸುಖಗಳನ್ನು ತೋಡಿಕೊಳ್ಳಬಹುದು. ಮಿತಿಮೀರಿದ ಕಷ್ಟಗಳನ್ನು ಎದುರಿಸಬೇಕಾಗಬಹುದು. ಆದರೂ ಧೃತಿಗೆಡದೆ ಹೆಣ್ಣುಮಕ್ಕಳು ಶೋಷಣೆಯನ್ನು ಎದುರಿಸಿ ನಿಲ್ಲುವ ಶಕ್ತಿ, ಸಾಮರ್ಥ್ಯಗಳನ್ನು ಪಡೆಯಬೇಕು. ಇದು ಕೇವಲ ನಾಲ್ಕು ಗೋಡೆಗಳ ಮಧ್ಯದಲ್ಲಿ ಸಿಗುವುದಿಲ್ಲ. ನಾಲ್ಕು ಹೆಣ್ಣುಮಕ್ಕಳ ಜೊತೆ ಸೇರಿದರೆ ಮಾತ್ರ ಸಾಧ್ಯ. 'ಹನಿ ಹನಿ ಗೂಡಿದರೆ ಹಳ್ಳ, ಮತ್ತು ತೆನೆತೆನೆಗೂಡಿದರೆ ಬಳ್ಳ ಎಂಬಂತೆ. ನಾಲ್ಕು ಕೈ ಸೇರಿದರೆ ಅದಕ್ಕೆ ಧೈರ್ಯ ಬೆಂಬಲ, ಹಾಗೇ ತಂದೆ ತಾಯಿಯರು ಸಹ ನೊಂದ ಹೆಣ್ಣುಮಕ್ಕಳ ಮತ್ತು ಮುಂದೆ ಬದುಕಿ ಬಾಳಬೇಕಾದ ಹೆಣ್ಣುಮಕ್ಕಳು ಸ್ವಾವಲಂಬಿಗಳಾಗಿ ಬಾಳಲು ಅವಕಾಶ ಮಾಡಿಕೊಡಬೇಕು.

ಇದನ್ನು ಓದಿದ ನಂತರ ನೀವುಗಳು ಯಾರಾದರೂ ಹೆಣ್ಣು ಮಕ್ಕಳ ಕಷ್ಟವನ್ನು ನುಂಗಿ ಬಾಳುತ್ತಿದ್ದರೆ ಅವರಿಗೆ ದಾರಿ ತೋರಿಸಿ. ಆಗ ನಿಮ್ಮ ಜೀವನದಲ್ಲಿಯು ಒಳ್ಳೆ ಕೆಲಸ ಮಾಡಿದ ತೃಪ್ತಿ ನಿಮಗೆ ಲಭಿಸುವುದರ ಜೊತೆಗೆ ನಿಮ್ಮ ಜೀವನ ಧನ್ಯವು ಹೌದು.

●

ಮಾನಸ ಪತ್ರಿಕೆ ಯಾವ ಸಂಸ್ಥೆಯ, ಸರ್ಕಾರದ ನೆರವಿಲ್ಲದೇ ಪ್ರಕಟವಾಗುತ್ತಿರುವ ಮಹಿಳೆಯರೇ ನಡೆಸುತ್ತಿರುವ ಸ್ವಾಯತ್ತ ಪತ್ರಿಕೆ. ಓದುಗರು ಹಾಗೂ ಸಹೃದಯರು ನೀಡುವ ಆರ್ಥಿಕ ನೆರವೇ ಪತ್ರಿಕೆಯ ಜೀವಾಳ. ಚಂದಾದಾರರಿಗೆ ಚಂದಾ ಅವಧಿ ಮುಕ್ತಾಯವಾದುದರ ಬಗ್ಗೆ ಸೂಚನೆಯನ್ನು ನೀಡಲಾಗುತ್ತದೆ. ಓದುಗರು ತಕ್ಷಣ ಚಂದಾ ನವೀಕರಿಸಬೇಕೆಂದು ಕೋರುತ್ತೇವೆ. ಪತ್ರಿಕೆಯು ಉಳಿದು ಬೆಳೆಯಬೇಕಾದರೆ ಓದುಗರ ಸಹಕಾರ ಅತ್ಯಗತ್ಯ.

**ವಾರ್ಷಿಕ ಚಂದಾ : 50 ರೂ.**

**ಸಂಸ್ಥೆಗಳಿಗೆ : 100 ರೂ.**

***ಸಂ. ಮಂಡಳಿ***

REGD No. CPMG/KA/BGE/289/2001

BOOK -POST
PRINTED MATTER

ವಿಳಾಸ :
**ಮಾನಸ**
ಪಂಚಾಯಿತಿ ರಸ್ತೆ
ಕಾಡುಗೋಡಿ
ಬೆಂಗಳೂರು - 560 067